# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಕೆಲವರು ತಮ್ಮ ಮಟ್ಟದಲ್ಲಿರುವವರು ತಮ್ಮ ಹಾಗೇ ಇರಬೇಕೆಂದು ಬಯಸುತ್ತ, ತಮಗಿಂತ ಮೇಲಿನ ಮಟ್ಟಕ್ಕೆ ಹೋಗಿಬಿಟ್ಟರೆ ಕರುಬುವರು. ಈ ಬಗೆಯ ಇನ್ನೊಂದು ಮುಖವಾದ ಶಂಕಾದೃಷ್ಟಿ ರಾಜನಿಗೂ ಇದ್ದರೆ ದೇಶದ ಗತಿ ಕೇಳುವುದೇ ಬೇಡ. ಇದನ್ನು ವಿಶದಪಡಿಸುವಂತೆ "ಬರಗಾಲ" ಮತ್ತು "ಸಹಜವಾದ ಶಂಕೆ" ಎಂಬ ಎರಡು ಕಥೆಗಳು ಈ ಸಂಚಿಕೆಯಲ್ಲಿವೆ.

ಫೆಬ್ರುವರಿ ಸಂಚಿಕೆಯಲ್ಲಿ ಪ್ರಾರಂಭವಾದ ಧಾರಾವಾಹಿ "ವಿಷ್ಣು ಕಥೆ"ಯ ಶೀರ್ಷಿಕೆ ಯಾಂತ್ರಿಕ ಲೋಪದಿಂದ ತಪ್ಪಾಗಿ ಬಿದ್ದುದಕ್ಕೆ ಚಿಂತಿಸುತ್ತೇವೆ.

## ಅಮರವಾಣಿ

ಕುಲಂ ರೂಪಂ ವಯೋ ವಿದ್ಯಾ ಧನಮೇ ತತ್ಸು ಪಂಚಕಮ್
ನ ತಾಂ ವಿನಯ ಹೇತುಃ ಸ್ಯು ರಸತಾಂ ಗರ್ವ ಕಾರಣಮ್

ಒಳ್ಳೆಯವಂಶ, ರೂಪ, ವಯಸ್ಸು, ವಿದ್ಯೆ, ಧನ ಇವೈದೂ ಉತ್ತಮರಿಗೆ ವಿನಯವನ್ನೂ, ಅಲ್ಪರಿಗೆ ಗರ್ವವನ್ನೂ ಉಂಟುಮಾಡುತ್ತವೆ.

---

ಸಂಪುಟ : ೭೦ ಮಾರ್ಚಿ '೮೯ ಸಂಚಿಕೆ : ೯

---

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦








# ದೈವದ ಸಂಬಂಧ

ಒಂದುಸಾರಿ ಕಿರೀಟಿ ಎಂಬ ಯುವಕನೊಬ್ಬನು ಉದ್ಯೋಗ ಹುಡುಕುತ್ತಾ ಊರೂರು ತಿರುಗ ತೊಡಗಿದನು. ಒಂದುದಿನ ಸಾಯಂಕಾಲ ಕತ್ತಲೆ ಯಾಗುವ ಹೊತ್ತಿಗೆ ಆಕಾಶವು ಮೋಡಗಳಿಂದ ಮುಚ್ಚಿ ಮಿಂಚು ಗುಡುಗು ಸಿಡಿಲುಗಳೊಂದಿಗೆ ಗಾಳಿಯೂ ಬೀಸತೊಡಗಿತು. ಅದರ ಬೆನ್ನಿಗೆ ಮಳೆಯೂ ಸುರಿಯತೊಡಗಿತು. ಗ್ರಾಮವು ಇನ್ನೂ ಅರ್ಧಮೈಲು ದೂರವಿತ್ತು. ಅವನು ಅತ್ತಿತ್ತ ನೋಡುತ್ತ ಬೇಗ ಬೇಗ ನಡೆಯುತ್ತಿದ್ದಾಗ, ಹತ್ತಿರವೇ ಶಿಥಿಲಾವಸ್ಥೆಯಲ್ಲಿದ್ದ ಮನೆಯೊಂದು ಕಂಡಿತು. ಕಿರೀಟಿ ತಟ್ಟನೆ ಓಡಿ ಆ ಮನೆಯ ಕಿರು ಜಗಲಿಯ ಮೇಲೆ ಏರಿ ನಿಂತನು.

ಅಷ್ಟರಲ್ಲಿ ಆನೆಯ ಸೊಂಡಿಲಿನ ಗಾತ್ರದ ಮಳೆ ಸುರಿಯಲು ತೊಡಗಿತು. ಸದ್ಯಕ್ಕೆ ಮಳೆ ತಗ್ಗುವ ಸೂಚನೆಯೇ ಕಾಣಲಿಲ್ಲ. ಈಗ ಏನು ಮಾಡುವುದೋ ಎಂದು ಮಿಡುಕುತ್ತ, ಕಿರೀಟಿ ಆ ಮನೆಯ ದ್ವಾರ ಬಂಧವನ್ನು ನೋಡಿದನು. ಬಾಗಿಲಿಗೆ ತುಂಬಾ ತುಕ್ಕುಹಿಡಿದ, ಯಾವ ಕಾಲದ್ದೋ ಒಂದು ಬೀಗ ನೇತಾಡುತ್ತಿದ್ದಿತು. ಅದನ್ನು ಅವನು ಎಳೆಯಲೋ ಬಿಡಲೋ ಎಂದು ಯೋಚಿಸುತ್ತಿರಲು, ನೆನೆದು ಮುದ್ದೆಯಾದ ಹುಡುಗಿಯೊಬ್ಬಳು ಆ ಮನೆಯ ಕಡೆಗೆ ಓಡಿಬಂದು ಇನ್ನೊಂದು ಬದಿಯಲ್ಲಿ ನಡುಗುತ್ತ ನಿಂತಳು. ಮಿಂಚಿನ ಕಾಂತಿಯಲ್ಲಿ ಕಿರೀಟಿ ಯನ್ನು ನೋಡಿ, "ಅಯ್ಯೋ!" ಎಂದು ಕಿರಿಚಿ ಕೊಂಡಳು. ಅವಳಿಗೆ ಇಪ್ಪತ್ತು ವಯಸ್ಸು ಇದ್ದೀತು.

ಕಿರೀಟಿ "ಹೆದರಬೇಡ" ಎನ್ನುತ್ತಾ ಅವಳ ಬಳಿಗೆ ಬಂದು ತನ್ನ ಮೈಮೇಲಿದ್ದ ವಸ್ತ್ರವನ್ನು ಅವಳಿಗೆ ಕೊಡುತ್ತಾ "ಮೊದಲು ತಲೆ ವರೆಸಿಕೋ. ನಾನು ಕಳ್ಳ ಸುಳ್ಳನೇನಲ್ಲ. ನಿನ್ನ ಹಾಗೇ ಮಳೆಗೆ ಆಶ್ರಯಿಸಿ ನಿಂತ ದಾರಿಹೋಕ. ನೀನು ಈ ಕತ್ತಲೆಯಲ್ಲಿ ಒಬ್ಬಳೇ ನೆನೆಯುತ್ತಾ ಎಲ್ಲಿಗೆ ಹೊರಟಿದ್ದಿ?" ಎಂದು ಕೇಳಿದನು.

ಅವಳು ಸ್ವಲ್ಪ ತಟಪಟಾಯಿಸಿ, ಕಿರೀಟಿಯ ಮುಖವನ್ನು ಪರೀಕ್ಷಿಸಿ ನೋಡಿ, "ಅಲ್ಲಿ ಪಕ್ಕದ ಗ್ರಾಮದಲ್ಲಿರುವ ನನ್ನ ಸ್ನೇಹಿತೆಯೊಬ್ಬಳಿಗೆ ಕಾಯಿಲೆ ಅಂತ ಗೊತ್ತಾಗಿ ನೋಡಿಬರಲು ಹೋಗಿದ್ದೆ. ಬಾಡಿಗೇ ಗಾಡಿಯವನು ಮಳೆಗಾಳಿ ಬರುವ ಸೂಚನೆ ನೋಡಿ, ಗಾಡಿ ಬಿಡಲಾಗುವುದಿಲ್ಲಾ ಅಂದುಬಿಟ್ಟ. ಮೂರು ಮೈಲು ನಡೆದೇ ಹೋದ

ಎಂ. ಕೆ. ಈಶ್ವರರಾವ್

ರಾಯಿತು ಅಂತ ಹೊರಟುಬಿಟ್ಟೆ. ಈಗ ಈ ಗಾಳಿ ಮಳೆಯಲ್ಲಿ ಏನು ಮಾಡುವುದೋ ಗೊತ್ತಾಗುವುದಿಲ್ಲ. ಇನ್ನು ಮನೆ ಸೇರಲು ಅರ್ಧಮೈಲು ದೂರವಷ್ಟೇ ಇದೆ." ಎಂದಳು.

"ನೋಡುವಾ. ಮಳೆ ನಿಂತರೆ ನಾನು ಜತೆಗೆ ಬರುತ್ತೇನೆ" ಎಂದು ಕಿರೀಟಿ ಹೇಳುತ್ತಿರಲು, ಬಾವಲಿಯೊಂದು ಕೀಚೆನ್ನುತ್ತಾ ಅವಳ ತಲೆಯ ಮೇಲಿಂದಾಗಿಯೇ ಹಾರಿ ಹೋಯಿತು. ಅವಳು ಪುನಃ "ಅಯ್ಯೊಮ್ಮೋ!" ಎಂದು ಕೂಗಿದಳು.

ಕಿರೀಟಿ ನಕ್ಕು, "ಮಳೆಯಲ್ಲಿ ಒಬ್ಬಳೇ ಇಷ್ಟು ದೂರ ಬಂದದ್ದು ನೋಡಿ, ನೀನು ತುಂಬಾ ಧೈರ್ಯವಂತಳು ಅಂದುಕೊಂಡೆ!" ಎಂದನು.

ಅವಳು ಸ್ವಲ್ಪ ನಾಚಿಕೊಂಡು, "ನಾನು ಕಳ್ಳರಿಗಿಂತಲೂ, ಕತ್ತಲೆಗಿಂತಲೂ, ಹಾವು ಚೇಳುಗಳಿಗಿಂತಲೂ, ದೆವ್ವಗಳೆಂದರೆ ತುಂಬಾ ಹೆದರುತ್ತೇನಪ್ಪ! ಇಂಥಾ ಪಾಳು ಮನೆಗಳಲ್ಲಿ ದೆವ್ವಗಳಿರುತ್ತವೆಂದು ಹೇಳುತ್ತಾರೆ, ಹೌದಾ!" ಎಂದಳು.

"ಅದಕ್ಕೇ ಮೊದಲು ನನ್ನನ್ನು ದೆವ್ವಾ ಅಂದುಕೊಂಡೆಯಾ? ನಿನ್ನ ಹೆಸರು ಕೇಳಲೆ? ನನ್ನ ಹೆಸರು ಕಿರೀಟಿ" ಎಂದನು. ಅವಳು ತನ್ನ ಹೆಸರು ಶಿಲ್ಪಿ ಎಂದಳು.

"ಹೊಸ ಹೆಸರು. ನೋಡು ಶಿಲ್ಪೀ, ನಮಗೆ ನಮ್ಮಂಥ ಮನುಷ್ಯರನ್ನು ನೋಡಿದ ಕೂಡಲೇ ಗೊತ್ತಾಗುವುದಿಲ್ಲ. ನಮ್ಮ ಸುತ್ತುಮುತ್ತಲಿರುವ ಮನುಷ್ಯರಲ್ಲಿ ದೆವ್ವ ಭೂತಗಳಿಗಿಂತ ಘೋರ ಗುಣದವರು ಇದ್ದಾರೆ. ನನ್ನ ಸಮಾಚಾರವನ್ನೇ ತೆಗೆದುಕೋ. ನನ್ನ ಅಪ್ಪ ತೀರಿಹೋದ ಮೇಲೆ, ಬಂಧುಗಳು ನನ್ನ ಮನೆ ಸೇರಿಕೊಂಡು ನನ್ನನ್ನು ಬಗೆಬಗೆಯಾಗಿ ಮೋಸಪಡಿಸಿ ಇದ್ದ ಸ್ವಲ್ಪ ಆಸ್ತಿಯನ್ನು ವಶಪಡಿಸಿಕೊಂಡರು. ನಾನು ಬದುಕುವ ದಾರಿ ಹುಡುಕುತ್ತ, ಊರೂರು ಅಲೆಯುತ್ತ ಇಲ್ಲಿ



ಸಿಕ್ಕಿಕೊಂಡಿದ್ದೇನೆ. ನನಗೆ ದೆವ್ವಗಳಿಗಿಂತ ಮನುಷ್ಯರೆಂದರೇನೇ ಭಯ" ಎಂದನು.

"ನಾನು ಮನುಷ್ಯಳಾದ್ದರಿಂದ..." ಎಂದು ಶಿಲ್ಪಿ ಮುಂದೆ ಹೇಳದೆ ನಕ್ಕಳು. ಅವನೂ ನಗುತ್ತ, "ನೀನು ಅಪರಿಚಿತಳಾದ್ದರಿಂದ ಹೆದರುವ ಅಗತ್ಯವೇನಿದೆ?" ಎಂದನು.

ಮಳೆ ಜೋರು ಜೋರಾಗಿ ಬರುತ್ತಲೇ ಇತ್ತಲ್ಲದೆ ತಗ್ಗುವ ಸೂಚನೆ ಕಾಣಲೇ ಇಲ್ಲ. "ಇನ್ನು ಹೊರಡುವ ಯೋಚನೆ ಬಿಡಬೇಕಾದ್ದೇ. ಈ ರಾತ್ರಿಯನ್ನು ಈ ಮನೆಯೊಳಗೇ ಕಳೆಯದೆ ಬೇರೆ ಉಪಾಯವಿಲ್ಲ" ಎಂದು ಹೇಳಿ ಕಿರೀಟಿ, ಮನೆಯ ಬಾಗಿಲಿಗೆ ಹಾಕಲ್ಪಟ್ಟ ತುಕ್ಕು ಹಿಡಿದ ಬೀಗವನ್ನು ಹಿಡಿದು ಬಲವಾಗಿ ಎಳೆದನು. ಅದು ಅವನ ಕೈಗೇ ಕಿತ್ತು ಬಂದಿತು.

ಈ ಕೂಡಲೇ ಒಳಗಿನಿಂದ, "ಯಾರವರು? ನಾನು ದೆವ್ವ ಕೂತಿದ್ದೇನೆ ಇಲ್ಲಿ! ಜಾಗ್ರತೆ! ಒಳಗೆ



ಬರಬೇಡಿ" ಎಂದು ಕೂಗಿ ಹೇಳಿದುದು ಕೇಳಿಸಿತು. ಶಿಲ್ಪಿ ಗದಗದಿಸುತ್ತ, ಕಿರೀಟಿಯ ಕೈಯನ್ನು ಹಿಡಿದು, "ಮಳೆ ಇದ್ದರೂ ಚಿಂತಿಲ್ಲ. ಓಡಿ ಹೋಗಿ ಬಿಡೋಣ ಬನ್ನಿ" ಎಂದಳು.

ಕಿರೀಟಿ ಅವಳ ಮಾತನ್ನು ಲಕ್ಷ್ಯಮಾಡದೆ ಬಾಗಿಲನ್ನು ಕಾಲಿನಿಂದ ಗಟ್ಟಿಯಾಗಿ ಒದ್ದನು. ಬಾಗಿಲು ಕಿತ್ತು ಹಿಂದಕ್ಕೆ ಬಿದ್ದುಬಿಟ್ಟಿತು.

ಅವನು ಕೋಣೆಯ ಕತ್ತಲೆಯೊಳಗೆ ನೋಡುತ್ತ, "ಎಲ್ಲಿರುವೆಯೋ ದೆವ್ವಾ! ನಾವು ಮನುಷ್ಯರು. ದೆವ್ವಗಳಿಗೆ ಹೆದರುವವರಲ್ಲ" ಎಂದು ಒಳಕ್ಕೆ ಹೋದನು. ಅವನನ್ನು ಅಂಟಿಕೊಂಡೇ ಶಿಲ್ಪಿಯೂ ಒಳಗೆ ಹೊಕ್ಕಳು.

ಆ ಕೋಣೆಯ ನಡುವಿನಲ್ಲಿ ಮಸಕಾದ ಬೆಳಕು ಹರಡಿತ್ತು, ಮುದಿ ದೆವ್ವವೊಂದು ಕುಳಿತಿರುವುದು ಕಂಡಿತು. ಅದು ಕಿರೀಟಿಯನ್ನೂ ಶಿಲ್ಪಿಯನ್ನೂ ಕಿಸುಗಣ್ಣಿನಿಂದ ನೋಡುತ್ತ "ಏನು ಧೈರ್ಯ! ಎಷ್ಟು ಸೊಕ್ಕು! ಈಗಲೇ ನಿಮ್ಮಿಬ್ಬರನ್ನೂ ನಿಂತ ಹಾಗೇ ನೆಲಕ್ಕೆ ಅಪ್ಪಳಿಸುತ್ತೇನೆ!" ಎಂದಿತು.

"ಸ್ವಲ್ಪ ತಡೆಯೋ ದೆವ್ವಾ! ಮೊದಲು ನಿನ್ನ ಸಮಾಚಾರ ಸ್ವಲ್ಪ ಹೇಳಿಬಿಡು. ಹಾಳಾದ ಈ ಕೊಳಕು ಕೊಂಪೆಯನ್ನು ಹೀಗೆ ಕಾವಲು ಕಾಯುವ ಕೊಳಕು ದೆವ್ವವಾಗಿರುವೆಯಲ್ಲಾ? ಇಂಥ ಗತಿ ಏಕೆ ಬಂತು ನಿನಗೆ?" ಎಂದು ಕೇಳಿದನು ಕಿರೀಟಿ.

ಅವನ ಪ್ರಶ್ನೆಯಿಂದ ಅವಮಾನಗೊಂಡು ಮೆತ್ತಗಾದ ಮುದಿದೆವ್ವ ಅಳುಮೋರೆ ಮಾಡಿಕೊಂಡು, "ಈ ಹಾಳುಕೊಂಪೆ ನನಗೂ ಕೊಳಕೇ. ನನ್ನ ಹೆಂಡ್ತೀ ಮಕ್ಕಳು ಹಣಾ ಹಣಾ ಅಂತ ನನ್ನನ್ನು ಜಿಗಳೇ ಹಾಗೆ ಅಂಟಿಕೊಂಡು ನಾನಾ ಹಿಂಸೆ ಕೊಡುತ್ತಾ ಇದ್ದರು. ಅಬ್ಬಬ್ಬ! ಸಂಪಾದಿಸುವ ಹಣ ಖರ್ಚು ಮಾಡಲಿಕ್ಕೆ ಅಂದುಕೊಂಡಿದ್ದಾರೆ. ನಾನೇನೂ ಅವರ ಬೇಳೆ ಬೇಯಲು ಬಿಡಲಿಲ್ಲ. ಇಲ್ಲಿ ಕಾವಲು ಕಾದುಕೊಂಡಿರೋದು ನಾನು ಅಡಗಿಸಿಟ್ಟ ಹಣದ ನಿಧಿಯನ್ನೇ!" ಎಂದಿತು.

ಕಿರೀಟಿ ದೆವ್ವವನ್ನು ಕನಿಕರದಿಂದ ನೋಡುತ್ತಾ, "ಪಾಪವೇ! ಹೆಂಡ್ತೀ ಮಕ್ಕಳೂ ನೀನೂ ಸಹ ಅನುಭವಿಸದೆ ಸತ್ತು ದೆವ್ವವಾಗಿ ಗುಮ್ಮನಹಾಗೆ ಆ ಹಣಕ್ಕೆ ಕಾವಲು ಕಾಯುವ ನಾಯಿ ಆಗಿದ್ದೀ ಅಂತ ಆಯ್ತು! ಪಾಪ! ಪಾಪ!" ಎಂದನು.

ಮುದಿದೆವ್ವವು ಕೆಳಗೆ ನೋಡುತ್ತಾ ಆಲೋಚನೆಗೆ ಬಿತ್ತು. ವರ್ಷಗಟ್ಲೆ ಹಾಗೆ ಕಾವಲು ಕುಳಿತಿರುವುದು ಬೇಸರವೆನಿಸಿತು. ಕೆಟ್ಟ ಅವಮಾನವೆನಿಸಿತು. ಅದು ಕೋಣೆಯ ನಡುವೆ ಬರಬರನೆ ತೋಡಿ, ನೆಲದಡಿಯಿಂದ ಒಂದು ಪೆಟ್ಟಿಗೆಯನ್ನು ಮೇಲೆತ್ತಿ, ಬಾಯಿ ತೆರೆದು ತೋರಿಸುತ್ತ, "ನೋಡಯ್ಯ, ಈ ಹಣ ಪೂರಾ ನೀನೇ ತೆಗೆದುಕೋ. ಇದನ್ನು ಕಾಯುವ ಭಾರ ಇನ್ನು ನನಗೆ ಬೇಡವೇ ಬೇಡ. ನೀನೇ ನೋಡಿಕೋ" ಎಂದಿತು.

ಕಿರೀಟಿ ಪೆಟ್ಟಿಗೆಯೊಳಗಿನ ನಾಣ್ಯಗಳನ್ನು ಕೈಗೆತ್ತಿಕೊಂಡು ನೋಡಿ "ಓಹ್! ನೀನು ಸತ್ತು ಬಹಳ ಕಾಲವಾದ ಹಾಗೆ ಕಾಣುತ್ತದೆ. ಈಗ ಈ ತಾಮ್ರದ, ಸೀಸದ ನಾಣ್ಯಗಳು ನಡೆಯುವುದಿಲ್ಲ." ಎಂದನು.

"ಅಯ್ಯಯ್ಯೋ ! ಹಾಗೇನೂ !" ಎಂದು ದೆವ್ವ ದೊಡ್ಡದೊಂದು ಉದ್ಗಾರ ತೆಗೆಯಿತು.

ಮರುಕ್ಷಣವೇ ಅದು ಬಾವಲಿಯಾಗಿ ಮಾರ್ಪಟ್ಟು ಪೆಟ್ಟಿಗೆಯ ನಾಣ್ಯಗಳ ಮೇಲೆ ಒಂದು ಸುತ್ತುಹಾರಿ ಕೀಚೆನ್ನುತ್ತ ತುರ್ರನೆ ಹೊರಗೆ ಹೋಗಿಬಿಟ್ಟಿತು.

ಕಿರೀಟಿ ಆ ಪೆಟ್ಟಿಗೆಯನ್ನು ದೆವ್ವವು ತೋಡಿದ ಗುಂಡಿಯೊಳಗೇ ದೂಡಿ, ಮಣ್ಣು ತಳ್ಳಿ ಕೈಯೊರೆಸಿಕೊಂಡು ಶಿಲ್ಪಿಯ ಕಡೆಗೆ ನೋಡಿದನು.

ಶಿಲ್ಪಿ ಆಶ್ಚರ್ಯದಿಂದ "ಅಬ್ಬ ! ನಿಮ್ಮ ಧೈರ್ಯವೇ !" ಎಂದಳು.

"ನನ್ನ ಧೈರ್ಯವಿರಲಿ. ಈಗ ರಾತ್ರಿಯನ್ನು ಇಲ್ಲಿಯೇ ಕಳೆಯಬೇಕಷ್ಟೆ ?" ಎಂದನು ಕಿರೀಟಿ.

ಇಬ್ಬರೂ ಕೋಣೆಯನ್ನು ಸಾಧ್ಯವಾದಷ್ಟು ಶುಭ್ರ ಮಾಡಿಕೊಂಡು, ಒಂದೊಂದು ಬದಿಯಲ್ಲಿ ಕುಳಿತು, ಕಣ್ಣಿಗೆ ಜೊಂಪು ಬರುವವರೆಗೆ ಏನೇನೋ ಕತೆಗಳನ್ನು ಹೇಳುತ್ತ, ನಡುನಡುವೆ ತೂಕಡಿಸಿ, ಅಂತೂ ಬೆಳಗು ಮಾಡಿದರು. ಕಿರೀಟಿ ಬೆಳಿಗ್ಗೆ ಎದ್ದಾಗ ಶಿಲ್ಪಿ ಹೊರಜಗಲಿಯಲ್ಲಿ ನಿಂತು, ರಾತ್ರಿಯ ಗಾಳಿ ಮಳೆಗಳ ಮಹಾ ರಭಸದಲ್ಲಿ ಮುರಿದು ಬಿದ್ದ ಮರಗಳನ್ನು ನೋಡುತ್ತಿದ್ದಳು.

"ಅಬ್ಬಾ ! ರಾತ್ರಿ ದೊಡ್ಡ ತುಫಾನೇ ಬಂದಿದೆಯೆಂದಾಯಿತು. ನಮಗೆ ಈ ದೆವ್ವದ ಕೊಂಪೆ ಸಿಕ್ಕಿದ್ದು ಅದೃಷ್ಟವೇ ಅನ್ನಬೇಕು." ಎಂದನು ಕಿರೀಟಿ.

"ನಿಮಗೆ ಇನ್ನೊಂದು ಅದೃಷ್ಟವೂ ಬಂದೀತು. ನನ್ನ ಅಪ್ಪನ ಹತ್ತಿರ ಹೇಳಿ ನಿಮಗೆ ಉದ್ಯೋಗ ಸಿಗುವ ಹಾಗೆ ಮಾಡಬೇಕೆಂದಿದ್ದೇನೆ. ಅದಕ್ಕಾಗಿ ನಾನೊಂದು ಸಣ್ಣ ಸುಳ್ಳು ಹೇಳುತ್ತೇನೆ. ನೀವು




ಹೌದು ಅಂದರೆ ಸಾಕು. ರಾತ್ರಿಯಲ್ಲಿ ಮಳೆ ಬರುವಾಗ ಕಳ್ಳರು ನನ್ನ ನಗಗಳನ್ನು ಕಿತ್ತುಕೊಳ್ಳಲು ನೋಡುವಾಗ ನೀವು ಬಂದು ಕಾಪಾಡಿದಿರೆಂದು ಹೇಳಿಬಿಡುತ್ತೇನೆ" ಎಂದಳು ಶಿಲ್ಪಿ.

ಕಿರೀಟಿ ಅವಳನ್ನು ಸುಮ್ಮನೆ ನೋಡಿ ಮಾತಾಡದೆ ತಲೆಯಾಡಿಸಿದನು, ಅಷ್ಟೇ.

ಆಮೇಲೆ ಅವರಿಬ್ಬರೂ ಅಲ್ಲಿಂದ ಹೊರಟು ಶಿಲ್ಪಿಯ ಮನೆಗೆ ಹೋದರು. ಸುತ್ತಲೂ ಹಣ್ಣಿನ ಮರಗಳೂ, ಹೂವಿನ ಗಿಡಗಳೂ ಇರುವ ಆವರಣದ ನಡುವೆ, ಗಂಭೀರವಾಗಿದ್ದ ಉಪ್ಪರಿಗೆಯ ಮನೆಯನ್ನು ನೋಡಿ, ಶಿಲ್ಪಿ ಧನಿಕರ ಮಗಳೆಂದು ಕಿರೀಟಿಗೆ ಗೊತ್ತಾಯಿತು.

ಶಿಲ್ಪಿಯ ತಂದೆ ಮಗಳನ್ನು ನೋಡಿದ ಕೂಡಲೇ, "ಕ್ಷೇಮವಾಗಿ ಬಂದೆಯಾ ಅಮ್ಮಾ ! ನೀನು ನಿನ್ನೆಯೇ ಬಾರದ್ದರಿಂದ ರಾತ್ರಿ ನನಗೆ ನಿದ್ದೆಯೇ ಬರಲಿಲ್ಲ." ಎಂದನು.

ಶಿಲ್ಪಿ ತಂದೆಗೆ ಕಿರೀಟಿಯನ್ನು ತೋರಿಸುತ್ತ, ತಾನು ಕಲ್ಪಿಸಿದ ಕಟ್ಟುಕತೆಯನ್ನು ಹೇಳಿ, "ಇವರು ಮಾಡಿದ ಸಹಾಯಕ್ಕೆ ಇವರಿಗೆ ಯಾವುದಾದರೊಂದು ಉದ್ಯೋಗ ಕೊಡಿಸಿಬಿಡಿರಿ ಅಪ್ಪಾ" ಎಂದಳು.

"ಉದ್ಯೋಗವೇ ! ಕೇವಲ ಒಂದು ಉದ್ಯೋಗ ಕೊಡಿಸಿದ ಮಾತ್ರಕ್ಕೇ ನನ್ನ ಋಣ ತೀರುವುದೇನು ?" ಎಂದು ಶಿಲ್ಪಿಯ ತಂದೆ ಕಿರೀಟಿಯ ಎರಡು ಕೈಗಳನ್ನೂ ಹಿಡಿದುಕೊಂಡನು.

ಕಿರೀಟಿ ಅವರೊಂದಿಗೆ, "ಕ್ಷಮಿಸಬೇಕು. ನಿಮ್ಮ ಮಗಳು ಹೇಳಿದ್ದು ನಿಜವೇನಲ್ಲ. ನಾನೇನೂ ಯಾವ ಕಳ್ಳರ ಕೈಯಿಂದಲೂ ಇವಳನ್ನು ಕಾಪಾಡಲಿಲ್ಲ. ಎಷ್ಟೇ ನಿರುದ್ಯೋಗಿಯಾಗಿದ್ದರೂ, ಸುಳ್ಳು ಹೇಳಿ ಉದ್ಯೋಗ ಸಂಪಾದಿಸುವುದು ನನಗೆ ಸ್ವಲ್ಪವೂ ಹಿಡಿಸದು" ಎಂದನು.

ತಂದೆ ಮಗಳ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದನು. ಶಿಲ್ಪಿ ನಗುತ್ತ ನಡೆದ ನಿಜ ಸಂಗತಿಯನ್ನೆಲ್ಲಾ ತಂದೆಗೆ ಹೇಳಿ, "ಅಪ್ಪಾ, ನೀವು ಈ ನಡುವೆ ನನ್ನ ಮದುವೇ ಬಗೆಗೆ ಪ್ರಯತ್ನ ಮಾಡುತ್ತಾ ಇದ್ದೀರಷ್ಟೆ ? ಇವರನ್ನು ನಾನು ಮೆಚ್ಚಿದ್ದೇನೆ ಅಪ್ಪಾ. ಇವರ ಮನಸ್ಸು, ಗುಣ ಹೇಗಿರುವುದೋ ಅಂತ ನೋಡಲಿಕ್ಕೇ ಆ ಸುಳ್ಳಿನ ಕಥೆ ಹೇಳಿದೆ. ಅದು ತನಗೆ ಇಷ್ಟವಿಲ್ಲ ಅಂದರಷ್ಟೇ ? ಆದರಿಂದ ಅವರ ಒಳ್ಳೆಯ ಪ್ರಾಮಾಣಿಕತೆಯೂ ಗೊತ್ತಾಗುತ್ತದೆ. ಅಲ್ಲವೇನಪ್ಪಾ ?" ಎಂದಳು.

ಶಿಲ್ಪಿಯ ತಂದೆ ತಲೆಯಾಡಿಸುತ್ತಾ, ಕಿರೀಟಿಯನ್ನು ನೋಡಿ, ಹೆಂಡತಿಯೊಡನೆ ಮಾತಾಡಲು ಬೇಗ ಬೇಗನೆ ಒಳಗೆ ಹೋದನು.

ಕಿರೀಟಿ ಶಿಲ್ಪಿಯೊಂದಿಗೆ, "ದೆವ್ವಗಳಿಗಿಂತ ಮನುಷ್ಯರದೇ ಭಯವೆಂದದ್ದು ಈಗ ನಿಜವಾಯಿತಷ್ಟೆ ? ನಿಮ್ಮ ಅಂತಸ್ತಿಗೆ ನಾನು ತಕ್ಕವನಲ್ಲ ಗೊತ್ತಾ. ಇನ್ನೊಮ್ಮೆ ಚೆನ್ನಾಗಿ ಆಲೋಚನೆ ಮಾಡಿಕೋ" ಎಂದನು.

ಶಿಲ್ಪಿ ನಸುಗೋಪದಿಂದ, "ಇಲ್ಲಿ ಅಂತಸ್ತಿನ ತಂಟೆ ಎತ್ತಬೇಡಿ. ನಿಮ್ಮ ಧೈರ್ಯವೂ ಗುಣವೂ ನನಗೆ ಹಿಡಿಸಿದೆ. ಒಂದುವೇಳೆ ನಿಮಗೆ ನಾನು ಹಿಡಿಸದಿದ್ದರೆ ಮಾತ್ರ ಭಯಪಡದೆ ಹೇಳಿಬಿಡಿರಿ. ಅಷ್ಟೇ" ಎಂದಳು.

"ಆಸ್ತಿಪಾಸ್ತಿ ಕಳೆದುಕೊಂಡು ನಿರುದ್ಯೋಗಿಯಾಗಿ ತಿರುಗುತ್ತಾ ಇದ್ದದ್ದು ಒಳ್ಳೇದೇ ಆಯಿತು. ಹಾಗಿಲ್ಲದಿದ್ದರೆ ನಿನ್ನಂಥವಳು ಹೆಂಡತಿಯಾಗಿ ಸಿಗುವ ಭಾಗ್ಯ ಬರುತ್ತಿತ್ತೆ ?" ಎಂದನು ಕಿರೀಟಿ.

ಆಗಲೇ ಹೊರಗೆ ಬರುತ್ತ ಕಿರೀಟಿಯ ಮಾತನ್ನು ಕೇಳಿದ ಶಿಲ್ಪಿಯ ತಾಯಿ ತಂದೆಯರು ಬಹಳ ಸಂತೋಷಪಟ್ಟರು.






## ೧೬

[ ಸಮುದ್ರತೀರದ ಕಡೆಯಿಂದ ಕೇಳಿ ಬಂದ ಕೂಗನ್ನು ತಿಳಿದುಕೊಳ್ಳಲು ಹೋದ ಶಿವದತ್ತ ಮೊದಲಾದವರಿಗೆ ಸಮುದ್ರಚೋರ ನಾಯಕನಾದ ಸಮುದ್ರಕೇತನು ಕಾಣಿಸಿದನು. ಅವನಿಂದ ತಪ್ಪಿಸಿಕೊಂಡು ಬಂದ ಇಬ್ಬರು ಸ್ತ್ರೀಯರು ಅಡವಿಯೊಳಗೆ ಓಡಿ ಹೋಗಿದ್ದರು. ಅವರನ್ನು ಬೆಂಬತ್ತಿಕೊಂಡು ಬಂದ ಸಮುದ್ರಕೇತನನ್ನು ಇದಿರಿಸಬೇಕೆಂದು ಶಿವದತ್ತನು ಹೊಂಚುತ್ತಿದ್ದನು. ]

ಶಿವದತ್ತನು ತನ್ನ ಅನುಚರರೊಂದಿಗೆ ಮರ ಪೊದರುಗಳ ಮರೆಯಲ್ಲಿ ಸ್ವಲ್ಪವೂ ಸದ್ದಾಗದಂತೆ ಉಸಿರು ಬಿಗಿದುಕೊಂಡು ನೋಡುತ್ತಿದ್ದನು. ತೀರದಲ್ಲಿ ಬಂದು ನಿಂತ, ಚೋರರ ತೋಳಿಯ ಎರಡು ನೌಕೆಗಳಿಂದ ಉತ್ಸಾಹದ ಕೇಕೇಕೂಗಾಟದೊಂದಿಗೆ ಅನೇಕ ಮಂದಿ ಸಮುದ್ರ ಚೋರರು ಕೆಳಗಿಳಿದರು. ಕೆಲವರು ಒಬ್ಬರನ್ನೊಬ್ಬರು ದೂಡಿ ಹಾರಿ ಹಾರಿ ಇಳಿದರು,

ಮೊದಲು ತೀರದ ಮರಳನ್ನು ತಲಪಿದ ಸಮುದ್ರಕೇತನು, ತೆರೆಗಳ ನಡುವೆ ಈಜಿ ಬಂದ ಆಯಾಸದಿಂದ. ತನ್ನ ಕತ್ತಿಯನ್ನು ಮರಳಿನಲ್ಲಿ ಚುಚ್ಚಿ, ಉಸ್ಸೆಂದು ಶ್ವಾಸ ಬಿಟ್ಟು "ಹೇಯ್! ಅವರಾರೋ ಹೆದರಿ ಕಾಡಿನೊಳಗೆ ಅಡಗಿದ್ದಾರೆ. ಎಷ್ಟು ಹೊತ್ತು ನಿಮಗೆ? ಸೋಮಾರಿಗಳೇ! ಓಡಿಬನ್ನೋ ಬೇಗ?" ಎಂದು ಹಿಂದಿರುಗಿ ಬಂದ ತನ್ನ ಅನುಚರರನ್ನು ಬೈದನು. ಎಲ್ಲರೂ ಅವನ ಹತ್ತಿರ ಬಂದು ಸೇರುತ್ತಲೇ ಸಮುದ್ರಕೇತನು ಕಾಡಿನ ಕಡೆಗೆ ಬೆರಳು ತೋರಿಸಿ, "ಆ ಹೆಣ್ಣುಗಳೆರಡೂ ಆ ಕಡೆಗೆ ಓಡಿವೆ. ಅದು ತಿಳಿಯದೆ ಎಲ್ಲೆಲ್ಲಿಗೋ ಓಡಿದರೆ ಏನುಲಾಭ? ಇಪ್ಪತ್ತು ಮಂದಿ ಮಾತ್ರ ಇಲ್ಲಿರಿ. ಉಳಿದವರೆಲ್ಲಾ ಕಾಡಿನೊಳಗೆ ಹೋಗಿ ನಾಲ್ಕೂಕಡೆ ಹುಡುಕಿ ಆ



ಓಡಿಹೋದ ಇಬ್ಬರು ಅಬಲೆಯರನ್ನು ಈ ಸಮುದ್ರ ಚೋರರು ಹಿಡಿಯದೆ ಬಿಡಲಾರರೆಂದೇ ಕಾಣುತ್ತದೆ. ಆ ಮೇಲೆ ಅವರಿಗಾವ ಹಿಂಸೆಯನ್ನು ನೆನೆದರೆ ಮೈಯೆಲ್ಲಾ ಜುಮುಗುಡುತ್ತದೆ." ಎಂದನು.

ಶಿವದತ್ತನು ನಿಸ್ಸಹಾಯಕನಂತೆ ತಲೆಯಾಡಿಸುತ್ತ "ಈಗ ಆ ದುಷ್ಟರಿಗೂ ನಮಗೂ ಅಜಗಜಾಂತರ. ಈ ಪರಿಸ್ಥಿತಿಯಲ್ಲಿ ನಾವೇನು ಮಾಡಲೂ ಸಾಧ್ಯವಿಲ್ಲ. ನಾವು ಕೇವಲ ಎಂಟೇ ಮಂದಿಗಳು. ಅಸಂಖ್ಯಾಕರಾದ ಈ ಕಳ್ಳರನ್ನು ಮೊಂಡುತನದಿಂದ ದುಡುಕಿ ಆಕ್ರಮಿಸಿಬಿಟ್ಟರೆ ನಮಗೆ ಸರ್ವನಾಶವೇ ಫಲ. ಇಷ್ಟು ಹೊತ್ತಿಗೆ ಆ ಸ್ತ್ರೀಯರು ಬಹಳ ದೂರ ಹೋಗಿದ್ದಾರು. ದೇವರ ದಯೆ ಅವರ ಮೇಲಿದ್ದೀತು, ಎಲ್ಲಿಯೋ ಅಡಗಿದ್ದಾರೆಂದೇ ನಂಬೋಣ. ತಾಳಿಕೊಳ್ಳಿರಿ ಮಂದಿರದೇವ ಪ್ರಭೂ" ಎಂದನು.

ಸ್ವಲ್ಪ ಹೊತ್ತಿನಲ್ಲಿ ಆ ನಂಬುಗೆಗೂ ಮಣ್ಣು ಬಿತ್ತು. ಕಾಡಿನೊಳಗೆಲ್ಲಾ ಮಾರ್ಮೊಳಗುವ ಹಾಗೆ ಕಳ್ಳರ ಉತ್ಸಾಹದ ಕೂಗಾಟಗಳು ಹಿಂದಿರುಗಿ ಬರುವವರಿಂದ ಕೇಳ ತೊಡಗಿತು. ಮಧ್ಯೆ ಮಧ್ಯೆ ಸ್ತ್ರೀ ಕಂಠದ ಚೀತ್ಕಾರವೂ ಕೇಳಿತು. ಸ್ವಲ್ಪ ಹೊತ್ತಿಗೆ ಅವರೆಲ್ಲಾ ಸಮುದ್ರಕೇತನ ಬಳಿಗೆ ಬಂದು, "ಅಯ್ಯಾ, ಆ ಮುದುಕಿ ಕಾಣಲೇ ಇಲ್ಲ. ಇವಳು ಮಾತ್ರ ಸಿಕ್ಕಿಬಿಟ್ಟಳು," ಎಂದು ಹೊತ್ತು ತಂದ ಒಬ್ಬಳನ್ನು ಕೆಳಗಿಳಿಸಿ ಹಿಡಿದು ನಿಲ್ಲಿಸಿದರು. ಅವಳು ಗಡಗಡನೆ ನಡುಗುತ್ತಾ, ಕಲ್ಲು ಕರಗುವಂತೆ ಆಕ್ರಂದನ ಮಾಡುತ್ತಿದ್ದಳು. ಅಸ್ತವ್ಯಸ್ತಳಾಗಿದ್ದ ಅತ್ಯಂತ ಸುಂದರಿಯಾದ ತರುಣೀ ಮಣಿಯವಳು.

ಅವಳ ದೀನ ಪರಿಸ್ಥಿತಿಯನ್ನು ನೋಡಿ ಸಮುದ್ರಕೇತನು ದೊಡ್ಡ ದನಿಯಿಂದ ನಕ್ಕು, "ಭೇಷ್! ನಮಗೆ ಬೇಕಾದವಳು ಇವಳೇ. ರಾಶಿ ರಾಶಿ ಹಣವನ್ನು ತರುವವಳು ಇವಳೇ! ಆ ಮುದುಕಿ ನಮಗೇಕೆ? ಸುಮ್ಮನೆ ತಿಂಡಿ ದಂಡ! ಹುಂ, ಹೆಣ್ಣು ದೆವ್ವಗಳನ್ನು ಹಿಡಿದು ತರಲೇಬೇಕು. ಬರಿಗೈಯಲ್ಲಿ ಬಂದು ಗಿಂದೀರಿ! ಮುಖ ನೋಡದೆ ಕಡಿದು ಹಾಕೇನು! ಜೋಕೆ!" ಎಂದು ಅಪ್ಪಣೆ ಮಾಡಿದನು.

ಮರುಕ್ಷಣದಲ್ಲೇ ಕಳ್ಳರೆಲ್ಲ ಬಿರಬಿರನೆ ಕಾಡಿನ ಕಡೆಗೆ ಓಡಿದರು. ಸಮುದ್ರಕೇತನು ಅವರಿಗೆ ಹೇಳಿದ ಮಾತುಗಳನ್ನೆಲ್ಲ ಶಿವದತ್ತನು ಕೇಳಿದನು. ಅವನೊಂದಿಗೆ ಅಡಗಿಕೊಂಡಿರುವವರೆಲ್ಲರೂ ಕೇಳಿದರು, ನೋಡುತ್ತಲೂ ಇದ್ದರು. ಆದರೆ ಅಷ್ಟು ಮಂದಿ ಕಳ್ಳರನ್ನು ಹೇಗೆ ಹೊಡೆಯಬೇಕೆಂಬುದು ಮಾತ್ರ ಯಾರಿಗೂ ಗೊತ್ತಾಗಲಿಲ್ಲ. ಕೈಕಾಲುಗಳು ತುಡಿಸುತ್ತಿದ್ದರೂ ವಿವೇಕವು ಅಲುಗಲುಬಿಡದೆ ನಿರಾಶೆಯಿಂದ ಮುಖ ಮುಖ ನೋಡಿಕೊಂಡರು. ಅಷ್ಟೇ.

ಮಂದರದೇವನು ಶಿವದತ್ತನೊಂದಿಗೆ ಮೆಲ್ಲನೆಯಲ್ಲಿ, "ಅಲ್ಲ ಶಿವದತ್ತಾ, ಈಗ ನಾವೇನು ಮಾಡಿದರೆ ಒಳ್ಳೆಯದಾದೀತು? ಹೀಗೆ ನೋಡುತ್ತಾ ಸುಮ್ಮನಿರಲು ನನಗಂತೂ ಸಾಧ್ಯವಿಲ್ಲ. ಪಾಪ, ಆ

ಇನ್ನು ಎಲ್ಲರೂ ಹಡಗಿಗೇರಿರಿ ! ಹೊರಡಿರಿ. ಎಚ್ಚರ ! ಇವಳನ್ನು ಅಲುಗಾಡಲು ಬಿಡಬೇಡಿ !" ಎಂದು ಹೇಳಿ ಹಿಂದಿರುಗಿ ನೋಡಿ "ಅಂದಹಾಗೆ ಇಲ್ಲಿ ಯಾರೋ ಹೊಸ ಮನುಷ್ಯರು ಸೇರಿದಂತಿತ್ತಲ್ಲಾ ? ನಿಮ್ಮ ಕಣ್ಣಿಗೆ ಬಿದ್ದರೇ ? ಗುರುತು ಹಿಡಿದಿರಾ ? ಯಾವುದಕ್ಕೂ ಈ ಪ್ರದೇಶವನ್ನು ಗುರುತಿಟ್ಟುಕೊಳ್ಳಿ. ಇಲ್ಲಿ ಬಂದವರಾರಾದರೂ ನಮ್ಮ ಕೈಗೆ ಸಿಕ್ಕಿ ಬೀಳಲೇ ಬೇಕು. ಲಾಭವನ್ನು ಏಕೆ ಬಿಡಬೇಕು? ಸಮಯ ನೋಡಿ ಬಂದು ಅವರನ್ನೆಲ್ಲಾ ಬೇಟೆಯಾಡದೆ ಬಿಡಬಾರದು" ಎಂದನು ರೋಷದಿಂದ.

ಸಮುದ್ರಕೇತನ ಹಡಗುಗಳೆಲ್ಲ ತೀರವನ್ನು ಬಿಟ್ಟು ಸಮುದ್ರದಲ್ಲಿ ಹೋಗತೊಡಗಿದವು. ಅವರೆಲ್ಲ ಆ ಹುಡುಗಿಯನ್ನೆತ್ತಿಕೊಂಡು ಕೆಲವೇ ನಿಮಿಷಗಳಲ್ಲಿ ಹಡಗುಗಳನ್ನೇರಿ ಹೋಗುವ ಅವರ ಚುರುಕುತನವನ್ನು ಕಂಡು ಶಿವದತ್ತ ಮೊದಲಾದವರಿಗೆ ಆಶ್ಚರ್ಯವಾಯಿತು. ಸಮುದ್ರವು ಅವರಿಗೊಂದು ಆಟದ ಬಯಲಿನಂತೆ ಅನಿಸಿತು.



ಶಿವದತ್ತನು ದೂರ ದೂರ ಹೋಗುತ್ತಿದ್ದ ಆ ಹಡಗುಗಳ ಕಡೆಗೆ ನೋಡುತ್ತ, "ಇನ್ನು ನಾವು ಮಾಡುವಂತಹುದೇನೂ ಇಲ್ಲ. ಯಾರ ಹಣೆಯಲ್ಲಿ ಏನು ಬರೆದಿದೆಯೋ ಅದನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ. ಉಳಿದು ಹೋದ ನಮ್ಮ ಊಟವನ್ನು ಹೊಟ್ಟೆಯೊಳಗೆ ತುರುಕಿಕೊಳ್ಳೋಣ, ಬನ್ನಿರಿ. ಸುಮ್ಮನೆ ಇಲ್ಲಿ ಯೋಚನೆ ಮಾಡಿದರೆ ಏನು ಪ್ರಯೋಜನ ?" ಎಂದನು.

ಅವರೆಲ್ಲ ಅಲ್ಲಿಂದ ಕದಲಿ ನಾಲ್ಕೈದಡಿ ಇಡುತ್ತಿರಲು ಸಮೀಪದಲ್ಲೆಲ್ಲೋ ಮತ್ತೊಬ್ಬಳು ಸ್ತ್ರೀಯ ಕಂಠದಿಂದ ಸರ್ವನಾಶವಾದಂತೆ ಹೊರಡುವ ಅಳುದನಿ ಕೇಳತೊಡಗಿತು.

ಶಿವದತ್ತನು ಮುಟ್ಟಿಬಿದ್ದು ಮಂದರದೇವನನ್ನು ನೋಡಿ, ಆ ರೋದನ ಧ್ವನಿ ಹೊರಡುವ ಕಡೆಗೆ ತಿರುಗಿದನು. ಎಲ್ಲರೂ ಅವನನ್ನು ಅನುಸರಿಸಿ ನಡೆದರು. ತಮ್ಮ ಊಟಕ್ಕೆ ಎಷ್ಟು ವಿಘ್ನಗಳಪ್ಪಾ ಅನಿಸಿತು ಸೈನಿಕರಿಗೆ. ಆ ಊಟ ಕೂಡಾ ಅಲ್ಲಿ ಕಾದಿರುವುದೆಂದು ಏನು ನಂಬುಗೆ ?

ಸ್ವಲ್ಪ ಹೊತ್ತಿಗೆ ಅವರೆಲ್ಲಾ ಆ ಸ್ತ್ರೀಯ ಬಳಿಗೆ ತಲುಪಿದರು. ಅವಳು ಬೇರೆ ಯಾರೂ ಅಲ್ಲ; ಸಮುದ್ರಕೇತನ ಕೈಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ ಇಬ್ಬರು ಸ್ತ್ರೀಯರಲ್ಲಿ ಅವಳೊಬ್ಬಳೆಂದು ನೋಡಿದ ಕೂಡಲೇ ತಿಳಿಯಿತು.

"ಅಮ್ಮಾ, ಯಾರು ನೀನು ? ಹೆಸರೇನು ? ಯಾವ ದೇಶದವಳು ? ಏನಾಯಿತು ? ಹೇಳುವ ಶಕ್ತಿಯಾದರೂ ಇದೆಯೇ ?" ಎಂದು ಒಮ್ಮೆಗೇ ಪ್ರಶ್ನೆಗಳ ಮೇಲೆ ಪ್ರಶ್ನೆ ಮಾಡಿದನು.

ಶಿವದತ್ತನ ಪ್ರಶ್ನೆಗಳನ್ನು ಕೇಳಿ ಅವಳು ಬೆಚ್ಚಿಬಿದ್ದು ಅವನ ಮುಖವನ್ನೇ ಮಿಳಿ ಮಿಳಿ ನೋಡಿದಳು. ಅವನ ಅನುಚರರ ಮುಖಗಳನ್ನೂ ಹೆದರಿಕೆಯಿಂ

ದೃಷ್ಟಿಯಿಂದ ನೋಡಿದಳು. ಅದನ್ನು ಗಮನಿಸಿದ ಶಿವದತ್ತನು, "ಅಮ್ಮಾ, ಹೆದರಬೇಡ. ನಮ್ಮಿಂದ ನಿನಗೆ ಯಾವ ಕೇಡೂ ಬಾರದು. ನೀನು ಇನ್ನೊಬ್ಬಳು ಹುಡುಗಿಯೊಂದಿಗೆ, ಸಮುದ್ರಕೇತನ ಕೈಯಿಂದ ತಪ್ಪಿಸಿ ಕೊಂಡು ಹೋದುದನ್ನೆಲ್ಲ ನಾವು ನೋಡಿದ್ದೇವೆ. ನಾವು ಬರೇ ಎಂಟು ಜನರು ಮಾತ್ರ ಆದುದರಿಂದ ಏನೂ ಮಾಡಲಾಗದೆ ಹೋದೆವು. ಆ ದುಷ್ಟರು ಸುಮಾರು ಐವತ್ತರುವತ್ತು ಮಂದಿ ಇದ್ದಾರಷ್ಟೇ? ನಾವು ಕೈ ಕೈ ಹೊಸಕಿಕೊಳ್ಳುತ್ತ ಸುಮ್ಮನಿರ ಬೇಕಾಯಿತಮ್ಮಾ. ಹೇಳು, ನಿನ್ನ ಸಂಗತಿಯನ್ನಾದರೂ ಹೇಳು. ನಿನಗೆ ಉಪಕಾರ ಮಾಡಲು ಏನಾದರೂ ದಾರಿ ಇದೆಯೋ ನೋಡೋಣ." ಎಂದನು.

"ಏನು ಹೇಳಲಿ! ನಮ್ಮ ಸ್ವಯಂಪ್ರಭೆಯನ್ನು ಆ ಕ್ರೂರರು ಮತ್ತೆ ಹಿಡಿದುಕೊಂಡು ಹೋದರು! ಆ ಕ್ರೂರರ ಕೈಗೆ ಸಿಕ್ಕಿದ ಮೇಲೆ ಮತ್ತೆ ನಮಗೆ ಸಿಗುವುದುಂಟೆ? ಅಯ್ಯೋ! ಸ್ವಯಂಪ್ರಭಾ! ನಿನ್ನನ್ನು ಉಳಿಸಲಾರದೆ ಹೋದೆನಲ್ಲಾ?" ಎಂದು ಆ ಸ್ತ್ರೀ ದೊಡ್ಡ ದನಿಯಿಂದ ಅಳಲು ಶುರು ಮಾಡಿದಳು. ಕಣ್ಣೀರು ಧಾರೆ ಧಾರೆಯಾಗಿ ಸುರಿಸಿದಳು.

ಶಿವದತ್ತನು ಅವಳ ದುಃಖವನ್ನು ಶಮನ ಮಾಡಲು ತೊಡಗಿದನು. ತಾವು ಅವಳಿಗೆ ಸಹಾಯ ಮಾಡಬಲ್ಲೆವೆಂಬ ನಂಬುಗೆ ಅವಳಿಗಾಗುವಂತೆ ತಮ್ಮ ಕಥೆಯನ್ನು ಸಂಕ್ಷೇಪವಾಗಿ ಹೇಳಿದನು.

ಅದನ್ನೆಲ್ಲ ಕೇಳಿದ ಮೇಲೆ ಅವಳು ದುಃಖವನ್ನು ನುಂಗಿ ಧೈರ್ಯ ತಂದುಕೊಂಡು, "ಅಯ್ಯಾ, ನನ್ನ ಹೆಸರು ದೇವಮಾಯಿ; ಶಮನ ದ್ವೀಪದವಳು. ಹನ್ನೆರಡು ವರ್ಷಗಳ ಹಿಂದೆ ಈ ಕಡಲಿನ ಕಳ್ಳ ಸಮುದ್ರಕೇತನು ನನ್ನನ್ನು ಬಲಾತ್ಕಾರದಿಂದ ಬಂದಿಯಾಗಿ ಹಿಡಿದುಕೊಂಡು ಹೋದನು. ಅಂದಿನಿಂದ ಅವನ ಹತ್ತಿರ ಸೇವಕಿಯಾಗಿ ಬದುಕಿಕೊಂಡಿದ್ದೇನೆ. ಈಗ ಅವನು ಬಂಧಿಸಿಕೊಂಡು ಹೋದ ಕನ್ಯೆಯ ಹೆಸರು ಸ್ವಯಂಪ್ರಭೆ. ನಾಲ್ಕು ದಿನಗಳ ಹಿಂದೆ ಅವಳು ಶಮನ ದ್ವೀಪದ ಕಡಲ ತೀರದಲ್ಲಿ ಏನೋ ಆಟವಾಡಿಕೊಂಡು ವಿಹರಿಸುತ್ತಿದ್ದಾಗ ಸಮುದ್ರಕೇತನು



ಅವಳನ್ನು ಹಿಡಿದುಕೊಂಡನು. ನನಗೂ ಅವಳಿಗೂ ತಾಯಿಮಗಳಷ್ಟು ಅಚ್ಚುಮೆಚ್ಚು" ಎಂದು ಅಲ್ಲಿಗೆ ನಿಲ್ಲಿಸಿ ಉಸಿರು ಬಿಡತೊಡಗಿದಳು.

"ಹಾಗಾದರೆ ಅವನ ಹತ್ತಿರ ನೀನು ಅಷ್ಟು ವರ್ಷಗಳಿಂದ ಇರುವಿಯೆಂದಾಯಿತು. ಆದ್ದರಿಂದ ಆ ಕ್ರೂರನನ್ನು ಕುರಿತು, ಅವನ ಬಲಾಬಲಗಳ ರಹಸ್ಯಗಳನ್ನು ಕುರಿತು ನಿನಗೆ ಎಲ್ಲವೂ ಗೊತ್ತಿರಬಹುದು" ಎಂದನು ಶಿವದತ್ತ.

ದೇವಮಾಯಿ ತಲೆಯಾಡಿಸಿ, "ನಿಜ, ನಿಮ್ಮ ಊಹೆಯಂತೆ ಅವನ ಸಂಗತಿ ಪೂರಾ ನನಗೆ ಗೊತ್ತಿದೆ. ಈ ದ್ವೀಪದ ಪಶ್ಚಿಮ ದಿಕ್ಕಿನ ತೀರದಲ್ಲಿ ಮಕರ ಮಂಡಲವೆಂಬ ಗುಡ್ಡಗಾಡುಗಳು ತುಂಬಿದ ಎತ್ತರ ಪ್ರದೇಶವಿದೆ. ಆ ಪ್ರಾಂತಕ್ಕೆ ಹೋಗಲು ಒಂದೇ ಒಂದು ದಾರಿ ಮಾತ್ರವೇ. ಆ ದಾರಿಯಲ್ಲಿ ಅನೇಕ ಕುದುರುಗಳಿದ್ದು, ಅವುಗಳ ನಡುವೆ ಸಮುದ್ರದ ಉಪ್ಪು ನೀರಿನ ಅನೇಕ ಕವಲು ನದಿಗಳಿವೆ. ಅಂತಹ ಒಂದು ಕುದುರಿನ ಎತ್ತರ ಪ್ರದೇಶದಲ್ಲಿದೆ ಆ ಚೋರನಾಯಕನ ನಿವಾಸಸ್ಥಾನ. ಅದರ ದಿಕ್ಕು ದೆಸೆಗಳೆಲ್ಲ ನನಗೆ ಗೊತ್ತಿದ್ದರೂ ನಾವು ಹೋಗುವುದು ಬಹಳ ಕಷ್ಟ." ಎಂದಳು ದೇವಮಾಯಿ.

"ಹಾಗಾದರೆ ಸ್ವಯಂಪ್ರಭೆಯನ್ನು ಆ ಕ್ರೂರನು ಅಲ್ಲಿಗೇ ಹಿಡಿದುಕೊಂಡು ಹೋಗಿದ್ದಾನೆ ಅನ್ನು. ಆ ಮಕರ ಮಂಡಲದಲ್ಲಿ ವಾಸಿಸುವವರು ನಾಗರಿಕ ಜಾತಿಯವರೋ, ಅಲ್ಲ ಕೇವಲ ಕ್ರೂರ ಸ್ವಭಾವದ ಕಾಡು ಜಾತಿಯವರೋ?" ಎಂದು ಶಿವದತ್ತನು ಕೇಳಿದನು.

"ಮಕರ ಮಂಡಲದ ನಿವಾಸಿಗಳು ಕೇವಲ ಅನಾಗರಿಕರು ಮಾತ್ರವೇ ಅಲ್ಲ; ಬೇಟೆಯೇ ಅವರಿಗೆ ಪ್ರಧಾನ ವೃತ್ತಿ, ಆ ಮಂಡಲಕ್ಕೆ ಒಬ್ಬ ರಾಜ ಕೂಡಾ ಇದ್ದಾನೆ. ಆದರೇನು? ನಾಲ್ಕೈದು ವರ್ಷಗಳಿಂದ ಆ ಪ್ರಾಂತವೆಲ್ಲಾ ಬಹಳ ಭಯದಿಂದ ಅಲ್ಲಕಲ್ಲೋಲವಾಗಿದೆ, ಅದಕ್ಕೆ ಕಾರಣ ಗುಡ್ಡದ ಪಾತಳಿಯ ಮಡುವಿನಲ್ಲಿರುವ ಒಂದು ದೊಡ್ಡ ಮೊಸಳೆ!" ಎಂದಳು ದೇವಮಾಯಿ.






"ಏನೇನು ! ಕೇವಲ ಒಂದು ಮೊಸಳೆ, ಅದು ಎಷ್ಟೇ ದೊಡ್ಡದಾಗಿದ್ದರೂ ನಿರ್ದಯಿಗಳಾದ ಊರವರೆಲ್ಲಾ ಹೆದರುತ್ತಾರೆಂದರೆ ನಂಬಲಿಕ್ಕೇ ಸಾಧ್ಯವಿಲ್ಲ" ಎಂದನು ಶಿವದತ್ತ.

"ಅಯ್ಯಾ, ಅದು ಎಲ್ಲಾ ಮೊಸಳೆಗಳಂಥ ಸಾಧಾರಣ ಮೊಸಳೆಯಲ್ಲ!" ಎಂದು ದೇವಮಾಯಿ ವಿಕೃತಾಕಾರನಾದ ವಜ್ರಮುಷ್ಟಿಯನ್ನು ನೋಡಿ, ಬೆಚ್ಚಿಬಿದ್ದವಳಂತಾಗಿ, ಅರ್ಧ ಬಾಯಿ ತೆರೆದು ಹಾಗೆಯೇ ಸ್ತಬ್ಧಳಾದಳು.

"ಇವನು ಒಳ್ಳೆಯವನು ! ಹೆದರಬೇಡ ಹೇಳು" ಎಂದು ಶಿವದತ್ತನು ಧೈರ್ಯ ಹೇಳಿದ ಮೇಲೆ, "ಅಯ್ಯಾ, ಆ ಮೊಸಳೆ ಯಾವುದೋ ಒಂದು ದೇವತೆ. ಅದಕ್ಕೆ ಪೈಶಾಚಿಕ ಶಕ್ತಿಗಳಿವೆಯೆಂದು ಹೇಳುತ್ತಾರೆ. ಅದನ್ನು ಮಕರದೇವತೆ ಎಂದೇ ಕರೆಯುತ್ತಾರೆ. ಅದಕ್ಕೆ ಆಹಾರವಾಗಿ ಪ್ರತಿ ದಿನವೂ ನಾಲ್ಕೈದು ಮಂದಿ ಮನುಷ್ಯರನ್ನು ಹಾಕುತ್ತಾರೆ, ಆ ಕಾರ್ಯವನ್ನು ಸ್ವಯಂಹರಿಶಿಖರಾಜನೇ ನೋಡಿಕೊಳ್ಳುತ್ತಾನೆ. ಅದರ ಆಹಾರಕ್ಕೆ ಹೊರ ದೇಶದ ಸುಂದರಿಯರೇ ಆಗಬೇಕು. ಈ ಕಳ್ಳ ಸಮುದ್ರಕೇತನು ಅಂಥವರನ್ನು ಹಿಡಿದು ತಂದು ಮಕರಮಂಡಲದ ರಾಜನಿಗೆ ಮಾರುತ್ತಾನೆ. ಅವನು ಕೇಳಿದಷ್ಟು ಹಣ ಸಿಗುತ್ತದೆ. ಎಷ್ಟು ಸುಂದರಿಯೋ ಅಷ್ಟು ಹೆಚ್ಚು ಹಣ." ಎಂದಳು.

"ಓಹೋ ! ಹಾಗೇನು ಸಮಾಚಾರ ?" ಎಂದು ಶಿವದತ್ತನು ಮಂದರದೇವನನ್ನು ನೋಡಿದನು.

ಆಗ ವಜ್ರಮುಷ್ಟಿ ಮುಂದಡಿಯಿಟ್ಟು, "ಅಯ್ಯಾ, ನೀವು ಅನುಮತಿ ಕೊಟ್ಟರೆ, ಆ ಮೊಸಳೆಯನ್ನು ನಾನು ಸಂಹರಿಸಿ ಬಿಡುತ್ತೇನೆ. ಆ ಕೆಲಸ ಮುಗಿಸಲು ಈಗಲೇ ಮಕರಮಂಡಲಕ್ಕೆ ಹೋಗಲೆ ?" ಎಂದು ಕೇಳಿದನು.

ವಜ್ರಮುಷ್ಟಿಯ ಮಾತು ಕೇಳಿ ದೇವಮಾಯಿಯ ಮುಖದಲ್ಲಿ ಒಂದು ಸಂತೋಷದ ಕಳೆ ಎದ್ದಿತು. "ಅಂದ ಹಾಗೆ ಈ ಕುಳ್ಳಯ್ಯನನ್ನು ನೋಡುವಾಗ ನನಗೊಂದು ವಿಷಯ ನೆನಪಿಗೆ ಬರುತ್ತದೆ. ಎರಡು ವರ್ಷಗಳ ಕೆಳಗೆ ಮಕರಮಂಡಲದ ಹಳೆಯ ಪೂಜಾರಿಯ ಮೈಮೇಲೆ ದೇವರು ಬಂದು, ಭವಿಷ್ಯತ್ತಿನಲ್ಲಿ ನಡೆಯುವುದನ್ನು ಹೇಳಿದ್ದಾನೆ. ನಾಲ್ಕಡಿ ಎತ್ತರದ ವಿಕೃತಾಕಾರದ ಕುಳ್ಳನೊಬ್ಬ ಮಕರಮಂಡಲಕ್ಕೆ ಬಂದು ಸೇರುತ್ತಾನೆ. ಅವನ ಕೈಯಲ್ಲಿ ಆ ಮೊಸಳೆಗೆ ಸಾವು ಬರೆದಿದೆಯಂತೆ. ಆ ಮೇಲೆ ಮಕರಮಂಡಲಕ್ಕೆ ಯಾವ ಅರಿಷ್ಟಗಳೂ ಇಲ್ಲದೆ ತುಂಬಾ ಒಳಿತುಗಳು ಸಂಭವಿಸಿ ಮಕರಮಂಡಲವು ಸುಭಿಕ್ಷವಾಗುತ್ತದಂತೆ." ಎಂದಳು ದೇವಮಾಯಿ.

ಅವಳು ಹೇಳಿದುದನ್ನು ಕೇಳಿ ಶಿವದತ್ತನಿಗೆ ನಗು ಬಂದಿತು. ಅವನು ವಜ್ರಮುಷ್ಟಿಯನ್ನು ನೋಡಿ, "ಅವನು ಹೇಳಿದ ವಿಕೃತಾಕಾರದ ಕುಳ್ಳ ಈ ವಜ್ರಮುಷ್ಟಿಯೇ ಆಗಿರಬೇಕು. ನೀನು ಆ ಮಕರಮಂಡ




ಲಕ್ಕೆ ದಾರಿ ತೋರಿಸಬೇಕು. ನಾವೆಲ್ಲರೂ ಈಗ ಅಲ್ಲಿಗೆ ಹೋಗಿ ಬಿಡೋಣ" ಎಂದನು.

"ದಾರಿಯಲ್ಲಿ ಮೊದಲು ಸಮುದ್ರಕೇತನ ನಿವಾಸ ಸ್ಥಾನ ಸಿಗುತ್ತದಲ್ಲಾ. ಅದನ್ನು ತಪ್ಪಿಸಿ ಅವನ ಕಣ್ಣಿಗೆ ಬೀಳದಂತೆ ಅಲ್ಲಿಗೆ ಹೋಗಲು ಬೇರೆ ದಾರಿ ಯಾವುದೂ ಇಲ್ಲ. ಇದಕ್ಕೆ ಏನು ಮಾಡುವುದೋ ನನಗಂತೂ ತಿಳಿಯದು" ಎಂದಳು ದೇವಮಾಯಿ ಹೆದರಿ ನಡುಗುತ್ತ.

"ಆ ಸಾಧ್ಯಾಸಾಧ್ಯತೆಗಳನ್ನು ನಾವು ನೋಡಿಕೊಳ್ಳುತ್ತೇವೆ. ಸ್ವಯಂಪ್ರಭೆ ಕೂಡಾ ಈಗ ಆ ಕಳ್ಳರ ನಾಯಕನ ಸ್ವಾಧೀನದಲ್ಲಿ ತಾನೇ ಇರುತ್ತಾಳೆ? ಹೊರಡೋಣ" ಎಂದು ಮಂದರದೇವನು ಹೋಗುವ ತವಕವನ್ನು ವ್ಯಕ್ತಪಡಿಸಿದನು.

"ಹೌದು. ಅವಳನ್ನು ಮಕರದೇವತೆಯ ಆಹಾರವಾಗಿ ಮಾರಲಿಕ್ಕೇ ಹಿಡಿದಿದ್ದಾನೆ. ಸುಂದರಿಯರಾದ ಯುವತಿಯರಿಗೂ, ಬಲಿಷ್ಠರಾದ ಯುವಕರಿಗೂ ಹರಿಶಿಖಿ ರಾಜನು ಹೆಚ್ಚು ಧನ ಕೊಡುತ್ತಾನೆ. ಸಮುದ್ರಕೇತನು ಅಂಥವರಿಗಾಗಿ ಸಮುದ್ರ ತೀರದಲ್ಲಿ ಅಲೆದಾಡುತ್ತಾ ಇರುತ್ತಾನೆ" ಎಂದಳು ದೇವಮಾಯಿ.

ಶಿವದತ್ತನು ಹಲ್ಲುಕಡಿಯುತ್ತ, "ಇದು ಘೋರವಾದ ಅನ್ಯಾಯ. ಹೇಗಾದರೂ ಮಾಡಿ ಈ ಸಾರಿ ಆ ಸ್ವಯಂಪ್ರಭೆಯನ್ನು ರಕ್ಷಿಸಲೇಬೇಕು. ಆ ಕ್ರೂರ ಸಮುದ್ರಕೇತನನ್ನೂ ಇಲ್ಲದಂತೆ ಮಾಡಬೇಕು. ಹರಿಶಿಖಿರಾಜನ ಸಂಗತಿ ಆಮೇಲೆ ನೋಡಿಕೊಳ್ಳಬಹುದು" ಎಂದನು.

ಎಲ್ಲರೂ ಹೊರಡುವ ತವಕವನ್ನೇ ಸೂಚಿಸಿದರು. ದೇವಮಾಯಿಯನ್ನು ಕರೆದುಕೊಂಡು ಎಲ್ಲರೂ ತಯಾರಾಗಿರುವ ಆಹಾರ ಪಾಕದ ಕಡೆಗೆ ಹೋದರು. ಬೇಗಬೇಗನೆ ಅದನ್ನೆಲ್ಲ ಹಂಚಿಕೊಂಡು ತಿಂದು ತೀರಿಸಿ ತೇಗಿದರು. ಆಗ ಸೂರ್ಯನು ನಡುನೆತ್ತಿಗೇರಿದ ಹೊತ್ತು. ಎಲ್ಲರೂ ಸ್ವಲ್ಪ ಹೊತ್ತು ಭುಕ್ತಾಯಾಸ ತೀರಿಸಿಕೊಂಡ ಮೇಲೆ, "ಇನ್ನು ಏಳಿರೆಲ್ಲಾ, ಹೊತ್ತು ಮುಳುಗುವುದರೊಳಗೆ ಸಮುದ್ರಕೇತನ ನಿವಾಸಸ್ಥಾನ ಕಂಡುಹಿಡಿಯುವುದು ಎಲ್ಲದಕ್ಕೂ ಒಳ್ಳೆಯದು" ಎಂದು ಶಿವದತ್ತನು ಎದ್ದನು.

ದೇವಮಾಯಿಯೊಬ್ಬಳೇ ದಿಕ್ಕು ದಾರಿ ತಿಳಿದವಳಾದುದರಿಂದ ಮುಂದೆ ಅವಳನ್ನೇ ನಡೆಸಿದರು. ಅವಳ ಬದಿಗಳಲ್ಲಿಯೂ, ಹಿಂದೆಯೂ ಉಳಿದವರು ನಡೆದರು. ಅಲ್ಲಲ್ಲಿ ದಾರಿ ಸರಿ ಮಾಡುವ ಕೆಲಸ ಸೈನಿಕರು ಮಾಡಬೇಕಾಗುತ್ತಿತ್ತು. ಕಾಡಿನೊಳಗೆ ಸರಿಯಾದ ದಾರಿಯೊಂದು ಇದ್ದರೆ ತಾನೇ? ದೇವಮಾಯಿ ನಡೆಯುವ ದಿಕ್ಕೇ ದಾರಿಯಾಗಿತ್ತು. ಜನಸಂಚಾರದ ಗುರುತುಗಳು ಅಲ್ಲೆಲ್ಲಿಯೂ ಇರಲಿಲ್ಲ. ಒತ್ತೊತ್ತಾಗಿ ಬೆಳೆದ ಹೆಮ್ಮರಗಳನ್ನು ಅಪ್ಪಿಕೊಂಡು ಅನೇಕ ಬಗೆಯ ಕಾಡುಬಳ್ಳಿಗಳೂ, ಪೊದರುಗಳೂ ಬೆಳೆದಿದ್ದುವು. ಹಗಲು ಕೂಡಾ ಅಲ್ಲಲ್ಲಿ ದೊಡ್ಡ ಕತ್ತಲೆಯಾಗಿ ಕಾಣುತ್ತಿತ್ತು. ಅಲ್ಲಲ್ಲಿ ಮರಗಳ

ಮೇಲೆ ನೇತಾಡಿಕೊಂಡು ಹೆಬ್ಬಾವುಗಳಿದ್ದುವು. ಆದುದರಿಂದ ಆಯುಧಗಳನ್ನು ಸಿದ್ಧಪಡಿಸಿಕೊಂಡು, ಕಣ್ಣಿಗೆ ಕಣ್ಣಿಟ್ಟು ನೋಡುತ್ತಾ ಬಹಳ ಎಚ್ಚರಿಕೆಯಿಂದ ನಡೆಯುತ್ತಿದ್ದರು.

ಎಷ್ಟು ದೂರ ಹೀಗೆ ನಡೆದರೆಂದು ಗೊತ್ತಾಗಲಿಲ್ಲ. ಸೂರ್ಯಾಸ್ತದ ವೇಳೆ ಸಮೀಪಿಸಿತು. ಆಗ ವಜ್ರಮುಷ್ಟಿ ಎಲ್ಲರಿಗಿಂತ ಮುಂದೆ ನಡೆದು, ಬದಿಯಲ್ಲಿದ್ದ ದೊಡ್ಡದೊಂದು ಮರದ ಮೇಲೆ ಏರಿದನು. ಅಲ್ಲಿಂದ ಅವನು ನೋಡಿದಾಗ ಸುಮಾರು ಒಂದು ಕ್ರೋಶ ದೂರದಲ್ಲಿ ಸಮುದ್ರದ ಕವಲು ನದಿಗಳೂ, ಕುದುರುಗಳೂ ಹರಡಿರುವುದು ಕಂಡಿತು. ಚಿಕ್ಕ ದೊಡ್ಡ ನಡುಗಡ್ಡೆಗಳ ಭೂಭಾಗಗಳನ್ನೂ ಒಂದೆಡೆಯಲ್ಲಿ ಕೆಲವು ಮನುಷ್ಯರನ್ನೂ ಕಂಡನು.

ವಜ್ರಮುಷ್ಟಿ ಕೂಡಲೇ ಮರದಿಂದ ಇಳಿದು, ಶಿವದತ್ತನ ಬಳಿಗೆ ಬಂದು, " ಅಯ್ಯಾ, ನಮ್ಮ ದೇವಮಾಯಿ ಹೇಳಿದಂತಹ ಪ್ರದೇಶದ ಸಮೀಪಕ್ಕೆ ಬಂದುಬಿಟ್ಟೆವು. ಆ ಮರದ ಮೇಲಿನಿಂದ ನೋಡಿದರೆ ಹಾವುಗಳ ಹಾಗೆ ಬಳಸಿಕೊಂಡಿರುವ ಸಮುದ್ರದ ನದಿ ಕಾಲುವೆಗಳ ಬದಿಯಲ್ಲೆಲ್ಲ ಭೂಪ್ರದೇಶ ಕಾಣುತ್ತದೆ. ಒಂದು ಕಡೆ ಮನುಷ್ಯರೂ ಓಡಾಡಿಕೊಂಡಿದ್ದಾರೆ. ಅವರೆಲ್ಲ ಸಮುದ್ರಕೇತನ ಕಡೆಯವರೇ ಆಗಿದ್ದಾರು " ಎಂದನು.

" ಹಾಗಾದರೆ ಸ್ವಲ್ಪ ಯೋಚಿಸಬೇಕಾಗಿದೆ. ನಾವೆಲ್ಲ ಒಮ್ಮೆಗೇ ಮುಂದೆ ಹೋಗುವುದು ಸರಿಯಾಗದು. ಮೊದಲು ನೀನು ಮಾತ್ರ, ಇಬ್ಬರನ್ನು ಜತೆಗೆ ಕರೆದುಕೊಂಡು ಹೋಗಿ, ಅಲ್ಲಿಯ ಪರಿಸ್ಥಿತಿ ಏನೆಂಬುದನ್ನು ತಿಳಿದುಕೊಂಡು ಬಾ. ಆಗಬಹುದೇ ?" ಎಂದನು ಶಿವದತ್ತ.

" ಅದೇ ಒಳ್ಳೆಯದು " ಎಂದು ವಜ್ರಮುಷ್ಟಿ ಇಬ್ಬರು ಅನುಚರರನ್ನು ತನ್ನೊಂದಿಗೆ ಕರೆದುಕೊಂಡು ಮುಂದೆ ಹೊರಟನು. ಅವರು ಸದ್ದಾಗದಂತೆ ಎಚ್ಚರಿಕೆ ವಹಿಸಿ. ಮರಗಳ ಮರೆಯಲ್ಲಿ ಅಡಗಿಕೊಳ್ಳುತ್ತಾ ಜಾಗರೂಕತೆಯಿಂದ ನಡೆದು, ಕಾಲುವೆಗಳು ಕವಲೊಡೆದ ಪ್ರಾಂತವನ್ನು ತಲಪಿದರು. ಅಲ್ಲಿ ಕೆಲವು ಕಡೆ ಸಮುದ್ರವು ನದಿಯಂತೆ ಅಗಲವಾದ ಕೆಲವು ಶಾಖೆಗಳಾಗಿ ಹೊರಟಿದ್ದುವು. ಅವುಗಳ ಬದಿಯಲ್ಲೆಲ್ಲಾ ಪೊದರುಗಳಿದ್ದವು. ಮುಂದೆ ಕಾಣುವ ಉಪ್ಪು ನೀರಿನ ನದಿಯಲ್ಲಿ ಚಿಕ್ಕ ಚಿಕ್ಕ ತೆಪ್ಪಗಳು ಕಂಡುಬಂದುವು. ಆ ನದಿ ಐವತ್ತು ಅರವತ್ತು ಗಜಗಳಷ್ಟು ಅಗಲವಾಗಿತ್ತು.

ಅದರಾಚೆಗಿನ ಎತ್ತರವಾದ ನಡು ಗಡ್ಡೆಯಲ್ಲಿ ಏನೇನೋ ಮಾತುಗಳೂ, ನಗುಗಳೂ, ಕೂಗಾಟ ಕುಣಿದಾಟಗಳೂ ನಡೆಯುವಂತೆ ಶಬ್ದ ಕೇಳಿಸುತ್ತಿದ್ದಿತು.

—(ಇನ್ನೂ ಇದೆ)





# ಜನ್ಮರಹಸ್ಯ

**ಮ**ತ್ತೆ ಮತ್ತೆ ಬೆಂಬತ್ತಿ ಬರುವ ಹಸಿವಿನಂತೆ, ತ್ರಿವಿಕ್ರಮರಾಜನು ಮತ್ತೆ ಬೇತಾಳದ ಬೆಂಬತ್ತಿ ಹೋಗಿ, ಮರದ ಮೇಲೆ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯಲು ತೊಡಗಿದನು. ಆಗ ಆ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜಾ, ದಿನಾ ಈ ಅರ್ಧರಾತ್ರಿಯ ಹೊತ್ತಿನಲ್ಲಿ ನೀನು ಪಡುವ ಕಷ್ಟವನ್ನು ನೋಡುವಾಗ ನಿನ್ನ ಮೇಲೆ ಕರುಣೆಗೆ ಬದಲು ಒಂದೊಂದು ಸಾರಿ ಕೋಪವೇ ಬರುತ್ತದೆ. ನೀನೋ ಅಥವಾ ನಿನ್ನನ್ನು ಈ ಕೆಲಸಕ್ಕೆ ಪ್ರೇರೇಪಣೆ ಮಾಡಿದವರೋ, ಯಾವುದೋ ಒಂದು ನಿಗೂಢವನ್ನು ಯಾರಿಗೂ ಗೊತ್ತಾಗದಂತೆ ಅಡಗಿಸಲು ನೋಡುವಂತೆ ನನಗೆ ಸಂಶಯ ಬರುವುದರೊಂದಿಗೆ, ಒಂದು ಕಥೆ ನೆನಪಿಗೆ ಬರುತ್ತದೆ. ಅಸಲು ರಹಸ್ಯವನ್ನು ಎಷ್ಟು ಭದ್ರಗೊಳಿಸಿದರೂ ಅಡಗಿರಿಸಲು ಸಾಧ್ಯವಾದೀತೆ ? ಉದಾಹರಣೆಗೆ ವಸಂತಸೇನನೆಂಬ ರಾಜನ ಕಥೆ ಹೇಳುತ್ತೇನೆ. ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆ ಹೇಳಲು ತೊಡಗಿತು :

ಬೇತಾಳಕಥೆಗಳು!...



ಶ್ರೀಪುರದ ರಾಜನಾದ ವಸಂತಸೇನ ಮಹಾ ರಾಜನಿಗೆ, ಸೌಂದರ್ಯದಲ್ಲಿ ಅಸಮಾನಳಾಗಿರುವ ಚಂದ್ರಾವತಿ ಎಂಬ ಕುಮಾರಿಯೊಬ್ಬಳಿದ್ದಳು. ಅವಳನ್ನು ನೋಡಿದವರೆಲ್ಲರೂ ಇಂತಹ ಸೌಂದರ್ಯದ ರಾಶಿ "ನ ಭೂತೋ ನ ಭವಿಷ್ಯತಿ" ಎನ್ನುತ್ತಿದ್ದರು.

ಇಂತಹ ಸುಂದರಿಯಾದ ಮಗಳನ್ನು ಕುರಿತು ಆಲೋಚಿಸುತ್ತಿದ್ದಂತೆ ರಾಜನಿಗೆ ಒಂದು ಆಲೋಚನೆ ಬರತೊಡಗಿತು. ಎಂಥವರಿಗಾದರೂ ಸೌಂದರ್ಯವು ಶಾಶ್ವತವಲ್ಲ. ವಯಸ್ಸು ಬೆಳೆದ ಹಾಗೆ ಅದು ಕರಗುತ್ತಾ ಹೋಗುತ್ತದೆ. ಈಗಿನ ತನ್ನ ಕುಮಾರಿಯ ರೂಪ ಲಾವಣ್ಯಗಳನ್ನು ಶಾಶ್ವತವಾಗಿ ಇರಿಸಿಕೊಳ್ಳ ಬೇಕಾದರೆ ಅವಳ ರೂಪವನ್ನು ಯಾವ ಚಿತ್ರಕಾರನಾದರೂ ಚಿತ್ರಿಸಬೇಕು, ಅವನು ಅಂತಿಂಥ ಚಿತ್ರಕಾರನಾಗಿರ ಬಾರದು. ಚಂದ್ರಾವತಿಯದು ಅದ್ಭುತ ಸೌಂದರ್ಯ ವಾದುದರಿಂದ. ಅವಳ ಚಿತ್ರ ಬರೆಯುವವನು ಕೂಡಾ ಅದ್ಭುತ ಕಲಾನೈಪುಣ್ಯವಿರುವವನಾಗಿರಬೇಕು.

ಅದಕ್ಕಾಗಿ ವಸಂತಸೇನನು ತನ್ನ ಆಸ್ಥಾನದ ಬುದ್ಧಿವಂತರಾದ ಉದ್ಯೋಗಸ್ಥರನ್ನು ಆರಿಸಿ, ದೇಶ ದೇಶಗಳಿಗೆ ಕಳುಹಿಸಿ ಕಡೆಗೆ ಕಲಾಸಾಗರನೆಂಬ ಒಬ್ಬ ಚಿತ್ರಕಾರನನ್ನು ಬರಮಾಡಿಕೊಂಡನು. ಕಲಾಸಾಗರನ ಪ್ರತಿಭೆಯನ್ನು ಕುರಿತು ಅನೇಕ ದೇಶಗಳಲ್ಲಿ ಶ್ಲಾಘಿಸಿ ಕೊಂಡಿದ್ದರು. ಅವನಲ್ಲಿ ಏನೋ ಒಂದು ದೈವಾಂಶ ವಿರುವುದೆಂದೂ, ಆದುದರಿಂದಲೇ ಅವನ ಚಿತ್ರಗಳು ಅಷ್ಟು ಶ್ರೇಷ್ಠವಾಗಿರುವುದೆಂದೂ ಎಲ್ಲರೂ ಹೇಳುತ್ತಿದ್ದರು. ಅವನು ಈ ಮೊದಲು ದೊಡ್ಡ ದೊಡ್ಡ ರಾಜ ಮಹಾರಾಜರ ಚಿತ್ರಗಳನ್ನು ಚಿತ್ರಿಸಿ ಕೊಟ್ಟಿದ್ದಾನಂತೆ.

ವಸಂತಸೇನ ರಾಜನು ಕಲಾಸಾಗರನೊಂದಿಗೆ ಅವನು ಮಾಡಬೇಕಾದುದನ್ನೆಲ್ಲ ಹೇಳಿ, ಚಂದ್ರಾವತಿ ಯನ್ನು ಅವನಿಗೆ ತೋರಿಸಿದನು. ಅವಳನ್ನು ನೋಡಿದ ಮೇಲೆ ಕಲಾಸಾಗರನು ರಾಜನೊಂದಿಗೆ "ಮಹಾ ಪ್ರಭೂ! ಇಂತಹ ರೂಪರಾಶಿಯ ಚಿತ್ರ ಬರೆಯುವ ಅದೃಷ್ಟವು ಎಲ್ಲರಿಗೂ ಸಿಗುವಂತಹುದಲ್ಲ. ನಾನು ನಿಮ್ಮ ಕುಮಾರಿಯ ಚಿತ್ರವನ್ನು ಸರಿಯಾಗಿಯೇ ಚಿತ್ರಿಸಿ ತೋರಿಸುತ್ತೇನೆ. ಕಡೆಗೆ ಅದರಲ್ಲಿ ಜೀವಕಳೆ ಎದ್ದು ಕಾಣಿಸುವಂತೆ ಬರಬೇಕಾದರೆ, ಇವಳಿಗೆ ಸಂಬಂಧಿಸಿದ ಕಳೆದ ಮೂರು ತಲೆಮಾರಿನವರ ಚರಿತ್ರೆಯ ವಿವರಗಳನ್ನು ಕೂಡಾ ನಾನು ತಿಳಿಯ ಬೇಕು" ಎಂದನು.

ಕಲಾಸಾಗರನು ಹೇಳಿದುದನ್ನು ಕೇಳಿ ವಸಂತಸೇನನ ಮುಖದಲ್ಲಿ ನೆರಳಿನ ಛಾಯೆ ಮೂಡಿತು. ಅದಕ್ಕೆ ಕಾರಣವಿದ್ದಿತು. ಹಿಂದೆ ಒಂದಾನೊಂದು ದಿನ ಅವನ ರಾಣಿಯ ತಂದೆ ಚಿಕ್ಕ ರಾಜನು ಬೇಟೆಯಾಡಲು ಅರಣ್ಯಕ್ಕೆ ಹೋದಾಗ, ಅಲ್ಲಿದ್ದ ಬೇಡರ ಯುವತಿ ಯೊಬ್ಬಳನ್ನು ಮೋಹಿಸಿ ಮದುವೆಯಾಗಿ ತನ್ನ ರಾಣಿಯಾಗಿ ಮಾಡಿಕೊಂಡನು. ಅವರಿಗೆ ಹುಟ್ಟಿದವಳು ಚಂದ್ರಾವತಿಯ ತಾಯಿ, ತನ್ನ ರಾಣಿ. ಇದು ರಾಜ

ವಂಶದ ಮುಖ್ಯಸ್ಥರಿಗಷ್ಟೇ ಗೊತ್ತಿರುವ ಗುಟ್ಟು. ಇದನ್ನು ಯಾವನೋ ಒಬ್ಬ ಚಿತ್ರಕಾರನೊಂದಿಗೆ ಹೇಳಲು ರಾಜನಿಗೆ ಇಷ್ಟವಿರಲಿಲ್ಲ. ಏನು ಮಾಡುವು ದೆಂದು ಆಲೋಚನೆಗೆ ಬಿದ್ದನು.

ರಾಜನು ತಟಪಟಾಯಿಸುವುದನ್ನು ನೋಡಿ ಕಲಾಸಾಗರನು, "ತಾವು ರಾಜಕುಮಾರಿಗೆ ಸಂಬಂಧಿಸಿದ ಮೂರು ತಲೆಮಾರಿನ ವಿವರಗಳನ್ನು ನನಗೆ ಹೇಳಲು ಇಷ್ಟಪಡದಿದ್ದರೆ ಹೋಗಲಿ, ಚಿತ್ರಸಾಗರನೆಂಬ ನನ್ನ ಸಹೋದರನೊಬ್ಬನಿದ್ದಾನೆ. ಅವನು ನಿಮ್ಮ ಕುಮಾರಿಯ ಅದ್ಭುತ ಸೌಂದರ್ಯವನ್ನು, ಗತ ಚರಿತ್ರೆಯ ವಿವರ ಕೇಳದೆಯೇ ಜೀವಕಳೆ ಬರುವಂತೆ ಚಿತ್ರಿಸಬಲ್ಲ ಸಮರ್ಥನು" ಎಂದನು.

"ಹಾಗಾದರೆ ಸರಿ" ಎಂದು ವಸಂತಸೇನ ರಾಜನು ಚಿತ್ರಸಾಗರನನ್ನು ಕರೆಯಿಸಿಕೊಂಡನು. ರಾಜನು ಹೇಳಿದುದನ್ನು ಕೇಳಿ ಚಿತ್ರಸಾಗರನು "ನಾನು ರಾಜಕುಮಾರಿಯ ಚಿತ್ರವನ್ನು ಚೆನ್ನಾಗಿಯೇ ಬರೆಯುತ್ತೇನೆ, ಹೇಳುವುದನ್ನು ಅಪಾರ್ಥ ಮಾಡಿ ಕೊಳ್ಳಬಾರದೆಂದು ಪ್ರಾರ್ಥನೆ. ಎಲ್ಲಕ್ಕೂ ಮೊದಲು ನಾನು ರಾಜಕುಮಾರಿಯೊಂದಿಗೆ ಏಕಾಂತದಲ್ಲಿ ಮಾತಾಡುವ ಅವಕಾಶ ಕೊಡಬೇಕು" ಎಂದನು.

"ಅದೇಕೆ?" ಎಂದು ರಾಜನು ಆಶ್ಚರ್ಯದಿಂದ ಕೇಳಿದನು. "ಪ್ರಭೂ, ನಾನು ಯಾರೊಂದಿಗಾದರೂ ಏಕಾಂತದಲ್ಲಿ ಸ್ವಲ್ಪ ಮಾತಾಡಿದೆನೆಂದರೆ ಅವರ ಪೂರ್ವ ತಲೆಮಾರಿನವರ ಚರಿತ್ರೆಯನ್ನೆಲ್ಲಾ ತಿಳಿದು ಕೊಳ್ಳಬಲ್ಲೆನು. ಇದು ನಾನು ಹೆಮ್ಮೆಯಿಂದ ಹೇಳಿ ಕೊಳ್ಳುವ ಮಾತಲ್ಲ. ಭಗವಂತನು ನನಗೆ ಪ್ರಸಾದಿಸಿದ ಒಂದು ವಿಶೇಷ ಮಾನಸಿಕ ಶಕ್ತಿಯದು!" ಎಂದನು ಚಿತ್ರಸಾಗರ.

ಹಿಂದಿನವರ ಚರಿತ್ರೆಯನ್ನು ಹೇಳಬೇಕೆಂದು ಕಲಾಸಾಗರನು ಕೇಳಿದರೆ, ಆ ಚರಿತ್ರೆಯನ್ನು ಏಕಾಂತದ ಸಂಭಾಷಣೆಯಿಂದ ತಾನೇ ತಿಳಿದುಕೊಳ್ಳುತ್ತೇನೆಂದು



ಚಿತ್ರಸಾಗರನು ಹೇಳುತ್ತಾನೆ! ಚಿತ್ರಕ್ಕೆ ಜೀವಕಳೆ ಬರಬೇಕಾದರೆ ಇಬ್ಬರಿಗೂ ಅದು ತಿಳಿಯಬೇಕಾಗಿದೆ. ತನ್ನ ಮನೆಯ ರಹಸ್ಯವನ್ನು ಇತರರೊಂದಿಗೆ ಹೇಳಲು ರಾಜನಿಗೆ ಇಷ್ಟವಿಲ್ಲ. ಇದಕ್ಕೇನು ಮಾಡುವುದೆಂದು ರಾಜನು ಆಲೋಚಿಸ ತೊಡಗಿದನು.

ರಾಜನ ಆಲೋಚನೆಯನ್ನು ನೋಡಿ ಚಿತ್ರ ಸಾಗರನು, "ಪ್ರಭೂ, ತಮ್ಮ ಆತಂಕ ಗೊತ್ತಾಯಿತು. ನೀವು ತಲೆ ಹಾಕಿದ ಕಾರ್ಯವನ್ನು ನಮ್ಮ ಸೋದರ ನಾದ ರೇಖಾಸಾಗರನಿಂದ ನೆರವೇರಿಸಿಕೊಳ್ಳಬಹುದು. ಹಳೆಯ ಚರಿತ್ರೆಗಳ ಪ್ರಸಕ್ತಿಯೇ ಇಲ್ಲದೆ ಅವನು ಚಿತ್ರ ಬರೆಯುವುದರಲ್ಲಿ ಬಹು ಸಮರ್ಥನು" ಎಂದನು.

ಅದನ್ನು ಕೇಳಿ ವಸಂತಸೇನ ರಾಜನು ಸಮಾಧಾನ ಗೊಂಡು ರೇಖಾಸಾಗರನನ್ನು ಕರೆಯಿಸಿದನು. ರಾಜನು ಹೇಳಿದುದನ್ನು ಕೇಳಿ ರೇಖಾಸಾಗರನು ಯಾವ ಪ್ರಶ್ನೆಯನ್ನೂ ಮಾಡದೆ ಚಂದ್ರಾವತಿಯ ಚಿತ್ರ ಪಟವನ್ನು ತಯಾರಿಸಿದನು. ಅದನ್ನು ನೋಡಿ

ಚಂದ್ರಾವತಿಗಾದ ಸಂತೋಷ ಅಷ್ಟಿಷ್ಟಲ್ಲ. ಕನ್ನಡಿಯಲ್ಲಿಯ ತನ್ನ ಪ್ರತಿಬಿಂಬದಂತೆಯೇ ಆ ಚಿತ್ರವಿದ್ದಿತು. ವಸಂತಸೇನ ರಾಜನು ರೇಖಾಸಾಗರ ಚಿತ್ರಕಾರನನ್ನು ಘನವಾದ ರೀತಿಯಲ್ಲಿ ಸನ್ಮಾನಿಸಿದನು.

ಎಲ್ಲಾ ಆದಮೇಲೆ ರೇಖಾಸಾಗರು ರಾಜನಿಂದ ಅಪ್ಪಣೆ ಪಡೆಯುವ ಸಂದರ್ಭದಲ್ಲಿ, "ಮಹಾಪ್ರಭೂ, ನನ್ನ ಶಕ್ತಿಗೆ ತಕ್ಕ ಹಾಗೆ ತಮ್ಮ ಕುಮಾರಿಯ ಚಿತ್ರವನ್ನು ಚಿತ್ರಿಸಿದ್ದೇನೆ. ಆದರೆ ನಿಮಗೆ ಗೊತ್ತಾಗಿದೆಯೋ ಇಲ್ಲವೋ. ಅದರಲ್ಲಿ ಜೀವಕಳೆ ಮಾತ್ರ ಇಲ್ಲ. ಜೀವಕಳೆ ಬರುವ ಹಾಗೆ ಚಿತ್ರ ಬಿಡಿಸುವ ಸಾಮರ್ಥ್ಯವಿರುವುದು ನನ್ನ ಇಬ್ಬರು ಅಣ್ಣಂದಿರಿಗೇ ಹೊರತು ನನಗಲ್ಲ!" ಎಂದನು.

ಅದನ್ನು ಕೇಳಿ ವಸಂತಸೇನನಿಗೆ ಮತ್ತೆ ಚಿಂತೆ ಶುರುವಾಯಿತು. ಈ ಮೊದಲು ಎಂದೋ ಒಮ್ಮೆ ಕಲಾಸಾಗರನು ಆನಂದಚಕ್ರವರ್ತಿಯ ಚಿತ್ರ ಬರೆದಿರುವನೆಂದು ಮಂತ್ರಿಗಳಲ್ಲೊಬ್ಬನು ಹೇಳಿದ್ದ. ಇದರ ನೆನಪು ಬಂದು ರಾಜನಿಗೆ ಒಂದು ಉಪಾಯ ಹೊಳೆಯಿತು. ಅವನು ಕಲಾಸಾಗರನನ್ನು ಕರೆಯಿಸಿ, "ನೀನು ಹಿಂದೆ ಆನಂದಚಕ್ರವರ್ತಿಯ ಚಿತ್ರ ಬರೆದಿರುವುದಾಗಿ ತಿಳಿಯಿತು. ಅಂದಮೇಲೆ ನಿನಗೆ ಅವರ ಹಿಂದಿನ ಪೂರ್ತಿ ಚರಿತ್ರೆ ತಿಳಿದಿರಬೇಕು. ಅದನ್ನೆಲ್ಲಾ ನನಗೆ ಹೇಳಬಲ್ಲೆಯಾ?" ಎಂದು ಕೇಳಿದನು.

"ಹೇಳಲಾರೆನು ಪ್ರಭುಗಳೇ" ಎಂದನು ಕಲಾಸಾಗರ ನಿಶ್ಚಿತ ಸ್ವರದಿಂದ.

"ಏಕೆ ಹೇಳಲಾರೆ? ಅದು ರಹಸ್ಯವೇನು?" ಎಂದು ವಸಂತಸೇನನು ಪ್ರಶ್ನಿಸಿದನು.

"ಅದಾವುದೂ ಈಗ ನನ್ನ ಮನಸ್ಸಿನಲ್ಲಿಲ್ಲ. ನನಗೆ ತಿಳಿದ ಚರಿತ್ರೆಗಳೆಲ್ಲವೂ ನಾನು ಬರೆಯುವ ಆ ಚಿತ್ರದೊಳಗೇ ಸೇರಿಹೋಗುತ್ತದೆ. ಆಮೇಲೆ ನನ್ನ ಮಿದುಳಿನಲ್ಲಿ ಆ ಚರಿತ್ರೆಗೆ ಸಂಬಂಧಿಸಿದ ಒಂದು ಸಣ್ಣ ಅಂಶ ಕೂಡಾ ಉಳಿದಿರುವುದಿಲ್ಲ" ಎಂದನು ಕಲಾಸಾಗರ.

ಈ ಉತ್ತರವನ್ನು ಕೇಳಿ ವಸಂತಸೇನ ರಾಜನಿಗೆ ಬಹಳ ತೃಪ್ತಿಯಾಯಿತು; ಸಮಾಧಾನವೂ ಆಯಿತು.



ಆದುದರಿಂದ ಶಂಕಾತಂಕಗಳೇನಿಲ್ಲದೆ ಚಂದ್ರಾವತಿಯ ಚರಿತ್ರೆಗೆ ಸಂಬಂಧಿಸಿದ ಎಲ್ಲಾ ವಿವರಗಳನ್ನೂ ಅವನಿಗೆ ಹೇಳಿ, ಚಿತ್ರ ಬರೆಯುವ ಕೆಲಸ ಒಪ್ಪಿಸಿದನು.

ಕಲಾಸಾಗರನು ಚಂದ್ರಾವತಿಯನ್ನು ಅವಳ ತಂದೆ ತಾಯಿಗಳ ಸಮಕ್ಷಮದಲ್ಲಿ ನಿಲ್ಲಿಸಿ, ಕೆಲವೇ ಗಂಟೆಗಳಲ್ಲಿ ರಾಜಕುಮಾರಿಯ ಚಿತ್ರಪಟವನ್ನು ತಯಾರಿಸಿದನು. ಅದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಅದು ಚಂದ್ರಾವತಿಯ ಪ್ರತಿಬಿಂಬದಂತೆ ಇರುವುದಕ್ಕೆ ಬದಲಾಗಿ, ಸಾಕ್ಷಾತ್ ಚಂದ್ರಾವತಿಯೇ ಎದ್ದು ನಿಂತಂತೆ ಕಾಣುತ್ತಿತ್ತು. ಅದರ ಮುಂದೆ ರೇಖಾಸಾಗರನ ಚಿತ್ರವು ಕಳೆಗುಂದಿದಂತೆ ಕಾಣುತ್ತಿತ್ತು.

ವಸಂತಸೇನ ರಾಜನು ಅತ್ಯಾನಂದದಿಂದ ಕಲಾಸಾಗರನಿಗೆ ದೊಡ್ಡ ದೊಡ್ಡ ಬಹುಮಾನಗಳನ್ನು ಕೊಟ್ಟನು. ಆ ಸಮಯದಲ್ಲಿ ಚಿತ್ರಸಾಗರನು ರಾಜನೊಂದಿಗೆ, "ಪ್ರಭೂ, ಚಂದ್ರಾವತಿಯ ಸೌಂದರ್ಯವು ಅತ್ಯದ್ಭುತವೇ ನಿಜ. ಅಂತಹ ಸೌಂದರ್ಯ ದೇವತೆಯನ್ನು ಚಿತ್ರಿಸುವ ಅವಕಾಶ ತಾವು ದೊಡ್ಡ ಮನಸ್ಸು ಮಾಡಿ ನನಗೂ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ" ಎಂದನು ಕೈ ಮುಗಿದು.

"ನೀನು ನಮ್ಮ ಕುಮಾರಿಯೊಂದಿಗೆ ಏಕಾಂತದಲ್ಲಿ ಮಾತಾಡಬೇಕು ಎಂದವನು. ಆದುದರಿಂದ ನಿನ್ನ ಕೋರಿಕೆ ನೆರವೇರುವಂತಿಲ್ಲಪ್ಪಾ" ಎಂದನು ರಾಜ.

"ಈಗ ನನಗೆ ಅದರ ಅಗತ್ಯವಿಲ್ಲ ಪ್ರಭುಗಳೇ, ನನ್ನ ಅಣ್ಣ ಕಲಾಸಾಗರನು ಚಿತ್ರಿಸಿದ ಚಿತ್ರದೊಂದಿಗೆ ಒಂದು ದಿನ ಏಕಾಂತದಲ್ಲಿರಲು ಅವಕಾಶ ಕಲ್ಪಿಸಿದರೆ ಸಾಕು. ಆಗ ಅವಳ ಚರಿತ್ರೆ ಪೂರಾ ನನಗೆ ಗೊತ್ತಾಗುತ್ತದೆ" ಎಂದನು ಚಿತ್ರಸಾಗರ.

ಈ ಸಂಭಾಷಣೆ ಕೇಳುತ್ತಿದ್ದ ಚಂದ್ರಾವತಿ, ಚಿತ್ರಸಾಗರನಿಂದಲೂ ತನ್ನ ಚಿತ್ರವನ್ನು ಬರೆಯಿಸಬೇಕೆಂದು ಕುತೂಹಲ ತೋರಿಸಿದಳು. ಆದರೆ ರಾಜನು ಅದಕ್ಕೆ ಒಪ್ಪಲಿಲ್ಲ. ಅವನು ಚಿತ್ರಸಾಗರನಿಗೆ ಉಚಿತ ರೀತಿಯಲ್ಲಿ ಸನ್ಮಾನ ಮಾತ್ರ ಮಾಡಿದನು. ಅನಂತರ ವಸಂತಸೇನ ರಾಜನು ಕಲಾಸಾಗರನು ಬರೆದ ಚಿತ್ರವನ್ನು ಅಂತಃಪುರಕ್ಕೆ ಕಳುಹಿಸಿ, ರೇಖಾಸಾಗರನು



ತಯಾರಿಸಿದ ಚಿತ್ರವನ್ನು ಮಾತ್ರ ಎಲ್ಲರೂ ನೋಡಲಾಗುವಂತಹ ಪ್ರದರ್ಶನ ಶಾಲೆಯಲ್ಲಿ ಇರಿಸಿದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ವಸಂತಸೇನ ರಾಜನ ಪ್ರವರ್ತನೆ ಅನುಚಿತವಾದುದಲ್ಲವೆ? ಒಬ್ಬ ದೊಡ್ಡ ಕಲಾಕಾರನ ವಿಷಯದಲ್ಲಿ ಅವನು ನಡೆದ ರೀತಿ ಅವಮಾನಕರವಾಗಿಲ್ಲವೇ? ಚಿತ್ರಸಾಗರನು ರಾಜಕುಮಾರಿಯೊಂದಿಗೆ ಏಕಾಂತ ಸಂಭಾಷಣೆಗೆ ಅಪ್ಪಣೆ ಕೇಳಿದ್ದಲ್ಲ: ತನ್ನ ಸೋದರನು ಚಿತ್ರಿಸಿದ ಚಿತ್ರದೊಂದಿಗೆ ಏಕಾಂತಕ್ಕೆ ಅವಕಾಶ ಕೇಳಿದ್ದ. ಇದಕ್ಕೆ ರಾಜನು ಅಭ್ಯಂತರ ಹೇಳುವ ಅಗತ್ಯವೇನಿತ್ತು?" ಅವನ ಪ್ರತಿಭೆಯನ್ನು ನೋಡಿ ಗೌರವಿಸಬೇಕಿತ್ತೋ ಬೇಡವೋ? ಈ ಪ್ರಶ್ನೆಗೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆಹೋದರೆ ನಿನ್ನ ತಲೆ ನೂರು ಹೋಳಾಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು :

ವಸಂತಸೇನ ರಾಜನ ಪ್ರವರ್ತನೆಯಲ್ಲಿ ಅನುಚಿತವಾದುದೇನೂ ಕಾಣುವುದಿಲ್ಲ. ಅದರ ಮೇಲೆ ಚಿತ್ರಸಾಗರನು ಮತ್ತೊಂದು ಸಾರಿ ರಾಜಕುಮಾರಿಯ ಚಿತ್ರ ಬರೆಯಬೇಕೆಂದು ಕೇಳಿಕೊಂಡುದೇ ಅನುಚಿತವೂ, ಅನಾಗರಿಕವೂ ಆಗಿ ಕಾಣುತ್ತದೆ. ರಾಜವಂಶದ ಚರಿತ್ರೆಯಲ್ಲಿ ಒಳಿತುಗಳೊಂದಿಗೆ ಕೆಡುಕುಗಳು ಕೂಡಾ ಇರುವುದು ಸಹಜವೇ. ಕೆಡುಕನ್ನು ಅಡಗಿಸಿಟ್ಟು ಒಳಿತುಗಳನ್ನು ಪ್ರಚಾರ ಮಾಡುವುದೂ ರಾಜರ ಲಕ್ಷಣವೇ ಆಗಿದೆ. ಕಲಾಸಾಗರನು ರಾಜವಂಶದ ರಹಸ್ಯಗಳನ್ನು ತಿಳಿದುಕೊಂಡರೂ ಚಿತ್ರವು ಪೂರ್ತಿಯಾದ ಮೇಲೆ ಅದನ್ನೆಲ್ಲ ಮರೆತೇ ಬಿಡುತ್ತಾನೆ. ಆದರೆ ಚಿತ್ರಸಾಗರನು ಹಾಗಲ್ಲ. ಚಿತ್ರವನ್ನು ನೋಡಿ ಚರಿತ್ರೆಯನ್ನು ತಿಳಿದು ಮನಸ್ಸಿನಲ್ಲೇ ಉಳಿಸಿಕೊಂಡು ಬಿಡುತ್ತಾನೆ, ಆಮೇಲೆ ಅವನು ಅದನ್ನು ಬೇರೆ ಯಾರಿಗಾದರೂ ಹೇಳುವ ಅಪಾಯವಿದೆ. ಆದುದರಿಂದಲೇ ರಾಜನು ತನ್ನ ಕುಮಾರಿಯ ಚಿತ್ರ ಬರೆಯಲು ಅವನಿಗೆ ಅನುಮತಿ ನಿರಾಕರಿಸಿದ್ದಾನೆ, ಅಷ್ಟು ಮಾತ್ರವಲ್ಲದೆ ಮುಂಚಾಗರೂಕತೆಯಿಂದ ಕಲಾಸಾಗರನು ಬರೆದ ಚಿತ್ರವನ್ನು ಅಂತಃಪುರಕ್ಕೆ ಕಳುಹಿಸಿದ್ದಾನೆ. ಅದನ್ನು ಪ್ರದರ್ಶನ ಶಾಲೆಯಲ್ಲಿಟ್ಟರೆ, ಆ ಚಿತ್ರವನ್ನು ನೋಡಿ, ಅವಳ ಗತ ಚರಿತ್ರೆಯನ್ನು ಯಾವ ಬುದ್ಧಿಶಾಲಿಗಳೋ ತಿಳಿದುಕೊಳ್ಳುವ ಸಂಭವವಿದೆಯಷ್ಟೆ? ಅಂತಲೇ ರೇಖಾಸಾಗರನ ಚಿತ್ರಪಟವನ್ನೇ ಪ್ರದರ್ಶನ ಶಾಲೆಯಲ್ಲಿಡಿಸಿದನು".

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ, ಮರದ ಕೊಂಬೆಗೆ ನೇತು ಹಾಕಿಕೊಂಡಿತು.





# ನಿಜನುಡಿದ ಧೀರ

ಅನೇಕ ವರ್ಷಗಳ ಹಿಂದೆ ನಾಗಲಾಪುರದ ನಾಗೇಂದ್ರವರ್ಮನೆಂಬ ರಾಜನಿಗೆ ನಾಗವಲ್ಲಿ ಎಂಬ ಕುಮಾರಿ ಇದ್ದಳು. ಅವಳು ಸೌಂದರ್ಯದಲ್ಲಿ ಮಾತ್ರವಲ್ಲದೆ ಬುದ್ಧಿವಂತಿಕೆಯಲ್ಲಿ ಕೂಡಾ ಅಸಮಾನಳೆಂದು ಎಲ್ಲರೂ ಶ್ಲಾಘಿಸುತ್ತಿದ್ದರು. ರಾಜನಿಗೆ ಗಂಡು ಮಕ್ಕಳಿಲ್ಲದುದರಿಂದ ಮಗಳಿಗೆ ರಾಜೋಚಿತವಾದ ವಿಶೇಷ ವಿದ್ಯೆಗಳನ್ನು ಕೂಡಾ ಕಲಿಸಿದ್ದನು.

ಹೀಗೆ ಎಲ್ಲದರಲ್ಲಿಯೂ ಜಾಣೆಯಾದ ರಾಜಕುಮಾರಿಗೆ ಮದುವೆಯ ವಯಸ್ಸು ಬಂದಾಗ, ಅನೇಕ ರಾಜಕುಮಾರರು ಅವಳನ್ನು ವರಿಸಿಕೊಳ್ಳಲು ನಾನು ತಾನೆಂದು ಬರತೊಡಗಿದರು. ನಾಗೇಂದ್ರವರ್ಮನು ಅವರ ವಿವರಗಳನ್ನು ಕುಮಾರಿಯೊಂದಿಗೆ ಹೇಳಿ, "ಇವರಲ್ಲಿ ಯಾರನ್ನು ಮದುವೆಮಾಡಿಕೊಳ್ಳಲು ನಿನಗೆ ಇಷ್ಟವೋ ಹೇಳು" ಎಂದನು.

ಆಗ ನಾಗವಲ್ಲಿ, "ಅಪ್ಪಾ, ನನ್ನ ಮದುವೆಯ ವಿಷಯವಾಗಿ ನೀವೇನೂ ಶ್ರಮಪಡಬೇಡಿ. ಬರುವ ರಾಜಕುಮಾರರಲ್ಲಿ ಬುದ್ಧಿವಂತನೂ ಧೈರ್ಯವಂತನೂ ಆದವನನ್ನು ನೋಡಿಯೇ ನಾನು ಮಾಲೆ ಹಾಕಬೇಕೆಂದಿದ್ದೇನೆ" ಎಂದಳು.

"ನಿನ್ನ ನಿಶ್ಚಯವೇನೋ ಚೆನ್ನಾಗಿದೆ, ಅಂತಹವನು ಯಾರೆಂದು ಹೇಗೆ ತಿಳಿದುಕೊಳ್ಳುವುದು ?" ಎಂದು ನಾಗೇಂದ್ರವರ್ಮನು ಕೇಳಿದನು.

"ನೀವು ನನಗೆ ಸ್ವಯಂವರವೆಂದು ಪ್ರಕಟಿಸಿರಿ. ಬಂದ ರಾಜಕುಮಾರರಿಗೆ ನಾನು ಮೂರು ಪ್ರಶ್ನೆಗಳನ್ನು ಕೇಳುತ್ತೇನೆ. ಅವುಗಳಿಗೆ ಸರಿಯಾದ ಉತ್ತರ ಕೊಟ್ಟವನನ್ನು ವಿವಾಹ ಮಾಡಿಕೊಳ್ಳುತ್ತೇನೆ" ಎಂದಳು ನಾಗವಲ್ಲಿ.

ನಾಗೇಂದ್ರವರ್ಮ ರಾಜನು ಕುಮಾರಿಯ ಮಾತಿನಲ್ಲಿ ನಂಬಿಗೆ ಇಟ್ಟು, ನಾಗವಲ್ಲಿಗೆ ಸ್ವಯಂವರದ ದಿನ ನಿಶ್ಚಯಿಸಿ ದೇಶಗಳಲ್ಲೆಲ್ಲಾ ಪ್ರಕಟಪಡಿಸಿದನು. ಬೇರೆ ಬೇರೆ ರಾಜ್ಯಗಳಿಂದ ಅನೇಕ ರಾಜಕುಮಾರರು ಸ್ವಯಂವರಕ್ಕೆ ಬಂದರು.

ಸ್ವಯಂವರ ಮಂಟಪದಲ್ಲಿ ನಾಗವರ್ಮ ರಾಜನು ಉನ್ನತಾಸನದಲ್ಲಿ ಕುಳಿತನು. ಅವನ ಕೆಳಗೆ ಮಂಗಳಾಲಂಕೃತವಾದ ಆಸನದಲ್ಲಿ ಕುಮಾರಿ ನಾಗವಲ್ಲಿಯೂ, ಇನ್ನೊಂದು ಬದಿಯ ಭವ್ಯಾಸನದಲ್ಲಿ ರಾಜಗುರುವೂ ಕುಳಿತರು. ಅವರ ಇದಿರಿನಲ್ಲಿ ಸಾಲಾಗಿ ರಾಜಕುಮಾರರು ಆಸೀನರಾಗಿದ್ದರು.

ಜಿ. ರಾಜಕುಮಾರ

ರಾಜಗುರು ಸಭೆಯನ್ನು ಉದ್ದೇಶಿಸಿ, "ಈಗ ರಾಜಕುಮಾರಿ ಕೇಳುವ ಮೂರು ಪ್ರಶ್ನೆಗಳನ್ನು ಅವಳ ಪರವಾಗಿ ನಾನು ತಿಳಿಸುತ್ತೇನೆ. ಅವುಗಳಿಗೆ ಉತ್ತರವನ್ನು ಹೇಳಬೇಕು. ಸರಿಯಾದುದನ್ನು ರಾಜ ಕುಮಾರಿಯೇ ನಿರ್ಣಯಿಸುತ್ತಾಳೆ." ಎಂದು ಹೇಳಿ ನಾಗವಲ್ಲಿಯನ್ನು ನೋಡಿ, "ಎಲ್ಲಿ ಆ ಪ್ರಶ್ನೆಗಳು?" ಎಂದು ಕೈ ನೀಡಿದನು.

ನಾಗವಲ್ಲಿ ಒಂದು ತಾಲ ಪತ್ರವನ್ನು ರಾಜ ಗುರುವಿಗೆ ಕೊಟ್ಟಳು. ಆತನು ಅದನ್ನು ಒಂದೆರಡು ಕ್ಷಣ ನೋಡಿ, "ವಜ್ರ ಕಠಿಣ ಪ್ರಶ್ನೆಗಳೇ ನಿಜ!" ಎಂದು ತಲೆದೂಗಿ, ರಾಜಕುಮಾರರನ್ನು ನೋಡಿ, "ನಮ್ಮ ರಾಜಕುಮಾರಿಯ ಮೂರು ಪ್ರಶ್ನೆಗಳು ಹೀಗಿವೆ. ಭಾರವಿಲ್ಲದ ವಸ್ತು ಯಾವುದು? ಕಾಣದಿರುವ ಆಕಾರ ಯಾವುದು? ಶ್ವಾಸೋಚ್ಛ್ವಾಸ ಮಾಡದಿರುವ ಪ್ರಾಣಿ ಯಾವುದು?" ಎಂದನು.

ಆ ಪ್ರಶ್ನೆಗಳು ಕೆಲವರಿಗೆ ಬೆಪ್ಪುಬಡೆದಂತಾಯಿತು. ಕೆಲವರು ತಮ್ಮ ಸೋಲನ್ನು ಒಪ್ಪಿಕೊಂಡು ತಲೆ ಬಾಗಿದರು. ಇನ್ನು ಕೆಲವರು ಏನೇನೋ ಉತ್ತರ ಹೇಳಲು ಪ್ರಯತ್ನಪಟ್ಟರು. ಅವು ಯಾವುದೂ ರಾಜಕುಮಾರಿಗೆ ಹಿಡಿಸಲಿಲ್ಲ.

ಇದನ್ನೆಲ್ಲ ನೋಡುತ್ತ ಮೌನವಾಗಿ ಕುಳಿತಿದ್ದ ವೀರಪುರದ ರಾಜಕುಮಾರ ಜಯಂತಕುಮಾರನು ಆಸನದಿಂದ ಎದ್ದು ನಿಂತು, "ರಾಜಕುಮಾರಿ ಕೇಳುವ ಆ ಮೂರು ಪ್ರಶ್ನೆಗಳಿಗೂ ಉತ್ತರ ಕೊಡಲು ಯಾರಿಗೂ ಸಾಧ್ಯವಾಗದು. ಅದಕ್ಕೆ ಬಲವಾದ ಕಾರಣವೇ ಇದೆ. ಭಾರವಿಲ್ಲವ ವಸ್ತು, ಕಾಣಿಸದಿರುವ ಆಕಾರ, ಶ್ವಾಸೋಚ್ಛ್ವಾಸ ಮಾಡದ ಪ್ರಾಣಿ ಸೃಷ್ಟಿಯಲ್ಲೆಲ್ಲಿಯೂ ನಮಗೆ ಕಾಣಲಾರವು. ಆದುದರಿಂದ ಮೂರು ಪ್ರಶ್ನೆಗಳಿಗೂ ಅರ್ಥವೇನೂ ಇಲ್ಲ" ಎಂದನು.

ಆವನ ಮಾತು ಕೇಳಿ ಸಭೆಯಲ್ಲಿ ಕಲಕಲರವವೆದ್ದಿತು. ಜಯಂತನು ರಾಜಕುಮಾರಿಯನ್ನು ಅವಮಾನ ಪಡಿಸಿದಂತೆ ಭಾವಿಸಿ, ಅವನಿಗೇನೋ ಶಿಕ್ಷೆಯಾಗುವುದೆಂದೇ ಕಾದಿದ್ದರು. ಆದರೆ ನಾಗವಲ್ಲಿ ಮಂದಹಾಸದ ಅರಳ್ಮೊಗದೊಂದಿಗೆ ಜಯಂತನ ಬಳಿಗೆ ಬಂದು, ಸಭೆಯ ಕಡೆಗೆ ತಿರುಗಿ: "ನನ್ನ ಪ್ರಶ್ನೆಗಳಿಗೆ ಅರ್ಥವಿಲ್ಲವೆಂಬುದೇ ನಿಜ. ಆದರೂ ಕೆಲವರು ಅವುಗಳಿಗೆ ಏನೋ ಅರ್ಥವಿರುವಂತೆ ಭ್ರಮಿಸಿದ್ದಾರೆ. ಮತ್ತೆ ಕೆಲವರಿಗೆ ಅವು ಅರ್ಥವಿಲ್ಲದ ಪ್ರಶ್ನೆಗಳೆಂದು ತಿಳಿದಿದ್ದರೂ ಹಾಗೆ ಹೇಳಲು ಶಂಕಿಸಿ ಸುಮ್ಮನಿದ್ದಾರೆ. ಅದನ್ನು ನಿರ್ಭೀತಿಯಿಂದ ಸ್ಪಷ್ಟವಾಗಿ ಹೇಳಿದ ಈ ವೀರಪುರದ ರಾಜಕುಮಾರನನ್ನೇ ವರಿಸುತ್ತೇನೆ. ಎಲ್ಲರೂ ಆಶೀರ್ವದಿಸಬೇಕು" ಎಂದು ಹೇಳಿ, ತನ್ನ ಗೆಳತಿಯ ಕೈಯಲ್ಲಿದ್ದ ವರಮಾಲೆಯನ್ನು ಜಯಂತ ಕುಮಾರನ ಕೊರಳಿಗೆ ಹಾಕಿದಳು.





# ಎಲ್ಲರಿಗೂ ಲಾಭವೇ!

ಒಂದು ಊರಿನಲ್ಲಿ ರಂಗಯ್ಯ ಎಂಬವನು ಪ್ರಾಯ ಸಮರ್ಥನಾಗಿದ್ದಾಗ, ತನ್ನ ಗ್ರಾಮದೊಳಗೆ ಮಾತ್ರವಲ್ಲದೆ ಸುತ್ತುಮುತ್ತಣ ಗ್ರಾಮಗಳಲ್ಲಿ ಕೂಡಾ ಒಳ್ಳೆಯ ಹೆಸರು ಪಡೆದಿದ್ದನು. ಬೇರೆಯವರಿಗೆ ಹೆಚ್ಚಿನ ನಷ್ಟವಾಗದಂತೆ ಎಚ್ಚರಿಕೆಯಿಂದ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವ ಜಾಣ್ಮೆ ಅವನಿಗಿತ್ತು.

ಒಂದುಸಾರಿ ಅವನಿಗೆ ಹಣದ ಅಡಚಣೆ ಬಂದಿತು. ಅವನು ಬಡ್ಡಿಗೆ ಸಾಲ ಕೊಡುವ ಭೂಪಯ್ಯನ ಬಳಿಗೆ ಹೋಗಿ, ತನ್ನ ಅಡಚಣೆಯನ್ನು ಹೇಳಿ, ತನ್ನ ಮಗಳಿಗೆ ಮಾಡಿಸಿದ ಬಂಗಾರದ ಸರವನ್ನು ಭೂಪಯ್ಯನ ಹತ್ತಿರ ಅಡವು ಇಟ್ಟು, ಎಂಟು ನೂರು ರೂಪಾಯಿ ಸಾಲ ತೆಗೆದುಕೊಂಡನು.

ಆಮೇಲೆ ಅವನು ಎಷ್ಟು ತಿಂಗಳಾದರೂ ಆ ಸರವನ್ನು ಬಿಡಿಸಿಕೊಂಡು ಹೋಗಲು ಬರಲಿಲ್ಲ. ಭೂಪಯ್ಯನು ರಂಗಯ್ಯನಿಗೆ ಒತ್ತಾಯಿಸತೊಡಗಿದನು. ಆದರೆ ಪ್ರತಿಸಾರಿಯೂ ಹಣ ಸೇರಲಿಲ್ಲವೆನ್ನುತ್ತ, ಇನ್ನಿಷ್ಟು ಗಡುವನ್ನು ಕೇಳತೊಡಗಿದನು.

ಅದೂ ತಪ್ಪಿಹೋಗಲು, ರಂಗಯ್ಯನ ಮೇಲೆ ಭೂಪಯ್ಯನ ಒತ್ತಾಯ ಹೆಚ್ಚಿತು. ರಂಗಯ್ಯ ಕೆಲವು ಸಾರಿ ಅವನಿಗೆ ತಪ್ಪಿಸಿಕೊಂಡು ತಿರುಗಿದನು. ಅವನ ನೌಕರನು ಮನೆಗೆ ಬಂದಾಗ ಮನೆಯಲ್ಲಿದ್ದೇ ಇಲ್ಲವೆಂದು ಹೇಳಿಸಿದನು. ಅಪ್ಪಿತಪ್ಪಿ ಆ ನೌಕರನು ಕಣ್ಣಿಗೆ ಬಿದ್ದರೆ ಇನ್ನೊಂದು ವಾರದೊಳಗೆ ಕೊಡುವುದಾಗಿ ಯಜಮಾನನೊಂದಿಗೆ ಹೇಳುವಂತೆ ಅಂಗಲಾಚುವನು. ಅವನ ಮೇಲೆ ಬಲವಂತ ಮಾಡಲಾಗದೆ, ಭೂಪಯ್ಯ ಅನೇಕ ಗಡುವುಗಳಿಗೆ ಒಪ್ಪಿಕೊಂಡು ನೋಡಿ ನೋಡಿ ಬೇಸತ್ತನು.

ಆಮೇಲ ಭೂಪಯ್ಯ ಸಹನೆ ಕಳೆದುಕೊಂಡು, ಸ್ವತಃ ರಂಗಯ್ಯನ ಮನೆಗೆ ಬಂದು, ಮತ್ತೆ ಮೂರೇ ದಿನಗಳ ಗಡುವೆಂದು ಒತ್ತಿ ಹೇಳಿ, ಅದಕ್ಕೆ ತಪ್ಪಿದರೆ ತಾನು ಅಡವಿಟ್ಟ ಸರವನ್ನು ಮಾರಿ, ತನಗೆ ಬರಬೇಕಾದ ಹಣಕ್ಕೆ ಜಮೆ ಮಾಡಿಕೊಳ್ಳುವುದು ಖಂಡಿತವೆಂದು ಹೇಳಿದನು.

ಆ ಮೂರು ದಿನಗಳು ಕಳೆದ ಮೇಲೆ ಕೂಡಾ ರಂಗಯ್ಯ ಭೂಪಯ್ಯನಿಗೆ ನೋಡಲು ಸಿಗಲಿಲ್ಲ. ಹಣ ಸಲ್ಲಿಸಲೂ ಇಲ್ಲ.

ಷೇಕ್ ಗಾಲಿಬ್



ಹೇಳಿದಂತೆ ಮಾಡುವ ನಿಶ್ಚಯದಲ್ಲಿ ಭೂಪಯ್ಯ ಆ ಬಂಗಾರದ ಸರವನ್ನು ತೆಗೆದುಕೊಂಡು ವ್ಯಾಪಾರಿಯಾದ ನಾಗರಾಜನ ಬಳಿಗೆ ಹೋಗಿ, "ಈ ಸರವನ್ನು ಸಾವಿರ ರೂಪಾಯಿಗೆ ಅಡವು ಇಟ್ಟುಕೊಂಡಿದ್ದೆ. ಹನ್ನೆರಡು ನೂರಕ್ಕೆ ಕಡಿಮೆಗೆ ಮಾತ್ರ ಮಾರಬಾರದು." ಎಂದು ಹೇಳಿ ಸರವನ್ನು ನಾಗರಾಜನಿಗೆ ಕೊಟ್ಟನು.

ಒಂದುದಿನ ನಾಗರಾಜನ ಅಂಗಡಿಗೆ ಆ ಊರಿನ ಜಮೀನ್ದಾರರು ಬಂದರು. ನಾಗರಾಜನು ಅವರಿಗೆ ರಂಗಯ್ಯನು ಮಾರಲು ಕೊಟ್ಟ ಬಂಗಾರದ ಸರವನ್ನು ತೋರಿಸಿ, "ಅಯ್ಯಾ, ಈ ಸರದ ಕುಸುರಿ ಕೆಲಸಗಳನ್ನು ನೋಡಿದಿರಾ! ಎರಡು ಸಾವಿರ ಕೊಟ್ಟರೂ ಹೆಚ್ಚಾಗದಂತೆ ಉತ್ತಮವಾದುದು. ನೀವು ದೊಡ್ಡವರು. ಹೆಚ್ಚು ಲಾಭ ಬೇಡ. ಹದಿನೈದು ನೂರಕ್ಕೇ ಕೊಡುತ್ತೇನೆ. ತೆಗೆದುಕೊಂಡು ಬಿಡಿ" ಎಂದನು.

ಜಮೀನ್ದಾರರು ನಾಗರಾಜನಿಗೆ ಸಾವಿರದೈನೂರನ್ನು ಕೊಟ್ಟು, ಆಸರವನ್ನು ತೆಗೆದುಕೊಂಡರು. ನಾಗರಾಜನು ಮುನ್ನೂರನ್ನು ತನ್ನ ಪೆಟ್ಟಿಗೆಗೆ ಸೇರಿಸಿ, ಭೂಪಯ್ಯನಿಗೆ ಸಾವಿರದ ಇನ್ನೂರಕ್ಕೆ ಮಾರಿದೆನೆಂದು ಹೇಳಿ, ಅಷ್ಟನ್ನು ಅವನಿಗೆ ಕೊಟ್ಟನು.

ಜಮೀನ್ದಾರರು ತಮ್ಮ ಮನೆಯಲ್ಲಿ ವಿಶ್ವಾಸದಿಂದ ಕೆಲಸಮಾಡುವವನಾದ ದೇವಯ್ಯನ ಮಗಳ ಮದುವೆಗೆ ಉಡುಗೊರೆ ಕೊಡಲಿಕ್ಕಾಗಿಯೇ ಆ ಬಂಗಾರದ ಸರವನ್ನು ಕೊಂಡುಕೊಂಡಿದ್ದರು. ಹಾಗೆಯೇ ಅವರು ಅದನ್ನು ಆ ಮದುಮಗಳಿಗೆ ಉಡುಗೊರೆಯಾಗಿ ಕೊಟ್ಟು, ದೇವಯ್ಯನೊಂದಿಗೆ, "ದೇವಯ್ಯಾ, ಈ ಸರವನ್ನು ಸ್ವಲ್ಪ ಜಾಗ್ರತೆಯಿಂದ ಇಟ್ಟುಕೊಳ್ಳುವಂತೆ ಮಗಳಿಗೆ ಹೇಳು. ಇದರ ಬೆಲೆ ಅಲ್ಪಸ್ವಲ್ಪವಲ್ಲ. ಎರಡು ಸಾವಿರ!" ಎಂದು ಹೇಳಿದರು.

ಆ ಸರವನ್ನು ನೋಡಿ ದೇವಯ್ಯ ಬಹಳ ಸಂತೋಷಪಟ್ಟನು. ಅಂತಹ ಉಡುಗೊರೆ ತನ್ನ ಮಗಳಿಗೆ ಬಂದುದನ್ನು ನೋಡಿ ಅವನಿಗೆ ಹೆಮ್ಮೆ ಎನಿಸಿತು. ಅವನು ಕೆಲವು ತಿಂಗಳ ಕೆಳಗೆ ಮಗಳ ಮದುವೆಯ ಖರ್ಚಿಗಾಗಿ ರಂಗಯ್ಯನ ಕೈಯಿಂದ ಐನೂರು ರೂಪಾಯಿ ಸಾಲ ತೆಗೆದುಕೊಂಡಿದ್ದನು.

ಅವನು ಮಗಳು ಅಳಿಯಂದಿರ ಒಪ್ಪಿಗೆಯಿಂದ, ಆ ಚಿನ್ನದ ಸರವನ್ನು ರಂಗಯ್ಯನ ಬಳಿಗೆ ತೆಗೆದುಕೊಂಡು ಹೋಗಿ, "ಈ ಬೆಲೆಬಾಳುವ ನಗವನ್ನು ಮಾರಲು ಇಷ್ಟವಿಲ್ಲದಿದ್ದರೂ ತಂದಿದ್ದೇನೆ. ಇದನ್ನು ನೀವು ಇಟ್ಟುಕೊಳ್ಳಿರಿ. ನಾನು ಸಾಧ್ಯವಾದಷ್ಟು ಬೇಗದಲ್ಲಿ ನಿಮ್ಮ ಸಾಲ ಕೊಟ್ಟು ತೀರಿಸಿಬಿಡುತ್ತೇನೆ. ಅಷ್ಟರೊಳಗೆ ನಿಮಗೆ ಹಣದ ಅಗತ್ಯವಿದ್ದರೆ, ಇದನ್ನು ಮಾರಿ, ನಿಮ್ಮ ಹಣ ಮುರಿದುಕೊಂಡು, ಉಳಿದುದನ್ನು ನನಗೆ ಕೊಡಿರಿ." ಎಂದನು.

ರಂಗಯ್ಯನು ಬಂಗಾರದ ಸರವನ್ನು ನೋಡಿ ಕಳವಳಪಡುತ್ತ, "ಅಸಲು ನಿನಗೆ ಈ ಸರ ಹೇಗೆ ಬಂತು ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ದೇವಯ್ಯ ಕೋಪದಿಂದ, "ಏನ್ರೀ ನಿಮ್ಮ ಪ್ರಶ್ನೆ! ಇದನ್ನು ಕದ್ದು ತಂದೆನೆಂದು ಅನುಮಾನ ಪಡುವಿರಾ ? ಜಮೀನ್ದಾರರು ನನ್ನ ಮಗಳಿಗೆ ಉಡುಗೊರೆ ಕೊಟ್ಟ ಸರವಿದು. ಅವರೇ ಹೇಳಿದರು. ಇದು ಎರಡು ಸಾವಿರ ರೂಪಾಯಿ ಬೆಲೆಯ ವಸ್ತು ಅಂತ !" ಎಂದನು.

"ಹಾಗೇನು" ಎಂದು ರಂಗಯ್ಯ ದೇವಯ್ಯನನ್ನು ತನ್ನೊಂದಿಗೆ ಬರುವಂತೆ ಹೇಳಿ, ಬಸವಾಚಾರಿಯ ಬಳಿಗೆ ಕರೆದುಕೊಂಡು ಹೋದನು. ಆ ಬಂಗಾರದ ಸರವನ್ನು ಬಸವಾಚಾರಿಗೆ ಕೊಟ್ಟು, ಅದರ ಬೆಲೆಯನ್ನು ನಿರ್ಣಯಿಸಬೇಕೆಂದು ಕೇಳಿಕೊಂಡನು.

ಬಸವಾಚಾರಿ ಸಾಣೆ ಕಲ್ಲಿಗೆ ಒರೆಸಿ ನೋಡಿ "ಒಳ್ಳೆಯ ಬಂಗಾರ! ಸಂದೇಹವೇನಿಲ್ಲ" ಎಂದನು.

ಅದನ್ನು ಕೇಳಿ ದೇವಯ್ಯ ಉತ್ಸಾಹದಿಂದ ರಂಗಯ್ಯನೊಂದಿಗೆ, "ಕೇಳಿದಿರಷ್ಟೆ ? ಜಮೀನ್ದಾರರ ಮೇಲೆಯೇ ಸಂದೇಹಪಡುವ ನಿಮ್ಮ ಬುದ್ಧಿಗೆ ಸಾಣೆ ಹಿಡಿಯಬೇಕು !" ಎಂದನು.

ರಂಗಯ್ಯ ಬಸವಾಚಾರಿಯೊಂದಿಗೆ ಸರವನ್ನು ಇನ್ನಿಷ್ಟು ಆಳಕ್ಕೆ ಒತ್ತಿ ತೇದು ನೋಡುವಂತೆ ಹೇಳಿದನು. ಬಸವಾಚಾರಿ ಹಾಗೆ ಮಾಡಿ ನೋಡಿ ಆಶ್ಚರ್ಯಪಡುತ್ತ, "ಎಲೆಲಾ ! ಇದು ಮೇಲಕ್ಕೆ ದಪ್ಪವಾಗಿ ಬಂಗಾರದ ಲೇಪ ಹಚ್ಚಲ್ಪಟ್ಟ ನಕಲೀ ಆಭರಣ. ಮಾರಿದರೆ ಐನೂರು ರೂಪಾಯಿ ಬಂದರೆ ಹೆಚ್ಚು !" ಎಂದನು.

ಆ ಮಾತು ಕೇಳಿ ದೇವಯ್ಯನ ಮೋರೆ ಬಿಳಿಚಿಕೊಂಡಿತು.

"ಸರಿ, ದೇವಯ್ಯಾ. ಜಮೀನ್ದಾರರ ಬಳಿಗೆ ಹೋಗಿ, ಹೀಗೆ ಸುಳ್ಳು ಹೇಳಿದಿರೇಕೆಂದು ಕೇಳುವೆಯಾ ?" ಎಂದು ರಂಗಯ್ಯನು ದೇವಯ್ಯನನ್ನು ಕೇಳಿದನು.



"ಅಯ್ಯಯ್ಯೋ! ಅದೆಲ್ಲಾ ಬೇಡ! ದೊಡ್ಡವರು ಏನು ಮಾಡಿದರೂ ನಡೆಯುತ್ತದೆ. ಅವರು ನನ್ನ ಮಗಳಿಗೆ ಐನೂರರ ವಸ್ತು ಉಡುಗೊರೆ ಕೊಟ್ಟದ್ದೂ ಹೆಚ್ಚೇ ಅಂದುಕೊಳ್ಳುತ್ತೇನೆ" ಎಂದನು ದೇವಯ್ಯ.

"ಅದೂ ನಿಜಾನ್ನು. ನಿನ್ನನ್ನು ನೋಡಿದರೆ ನನಗೆ ತುಂಬ ಕನಿಕರವೆನಿಸುತ್ತದೆ. ನಿನ್ನ ಸಾಲ ಐನೂರರ ಲೆಕ್ಕದಲ್ಲಿ ಇದನ್ನು ಇಟ್ಟುಕೊಳ್ಳುತ್ತೇನೆ. ಬಡ್ಡಿ ಬೇಡ ಬಿಡು" ಎಂದು ಹೇಳಿ ರಂಗಯ್ಯನು ಅವನ ಒಪ್ಪಿಗೆಯಿಂದ ಆ ಸರವನ್ನು ತೆಗೆದುಕೊಂಡು ಹೊರಟನು.

ಇದನ್ನೆಲ್ಲಾ ಬಸವಾಚಾರಿಯ ಅಂಗಡಿಯಲ್ಲಿ ಕುಳಿತುಕೊಂಡು ಕೇಳುತ್ತಾ ಇದ್ದ, ರಂಗಯ್ಯನ ಸ್ನೇಹಿತ ಗುರುವಯ್ಯನು ರಂಗಯ್ಯನ ಹಿಂದೆಯೇ ಬಂದು, ಕರೆದು ನಿಲ್ಲಿಸಿ, "ಅಲ್ಲಯ್ಯಾ ರಂಗಯ್ಯಾ, ನಿನಗೇನಾದರೂ ಹುಚ್ಚು ಹಿಡಿಯಿತೆ? ಬಸವಾಚಾರಿ ಹೇಳಿದ ಮಾತ್ರಕ್ಕೆ ಆ ಬಂಗಾರದ ಸರ ಐನೂರು ರೂಪಾಯಿಯದೇ ಎಂದು ಖಂಡಿತವಾದ ಹಾಗಾಗುತ್ತೇನು? ಆ ನಕಲೀ ಸರವನ್ನು ನಿನ್ನ ಸಾಲಕ್ಕೆ ಬದಲು ಅಂದದ್ದು ಸರಿಯಲ್ಲಯ್ಯ. ಅದನ್ನು ದೇವಯ್ಯನಿಗೇ ಕೊಟ್ಟು ನಿನ್ನ ಸಾಲ ನಿಧಾನದಲ್ಲಿ ತೀರಿಸುವಂತೆ ಹೇಳಬಾರದಿತ್ತೇನು?" ಎಂದನು.

ಆ ಪ್ರಶ್ನೆಗೆ ರಂಗಯ್ಯ, ಕಣ್ಣು ಹಾರಿಸಿ, "ನಾನು ಈ ಸರವನ್ನು ತೆಗೆದುಕೊಳ್ಳದೇ ಹೋದರೆ ದೇವಯ್ಯ ಎಂದೋ ಒಂದುದಿನ ಬಾಯಿ ಜಾರಿ ಜಮೀನ್ದಾರರೊಂದಿಗೆ ಇದು ನಕಲೀ ಮಾಲು ಅನ್ನುತ್ತಾನೆಂದುಕೋ. ಆಗ ಜಮೀನ್ದಾರರು ಇದರ ಹುಟ್ಟು ಪೂರ್ವೋತ್ತರಗಳನ್ನು ಶೋಧಿಸಲು ತೊಡಗುತ್ತಾರೆ. ಅದು ಕಡೆಗೆ ನನ್ನ ಕುತ್ತಿಗೆಗೇ ಬಂದುಬಿಡುತ್ತದೆಂದು ನನಗೆ ಗೊತ್ತು." ಎಂದನು.

"ಅದು ಹೇಗೆ?" ಎಂದು ಗುರುವಯ್ಯ ಅತ್ಯಾಶ್ಚರ್ಯದಿಂದ ಕೇಳಿದನು.

"ಹೇಗೆಂದರೆ, ನಾನು ಇನ್ನೂರೈವತ್ತು ರೂಪಾಯಿಗೆ ಸಾಮಾನ್ಯವಾಗಿ ಯಾರಿಗೂ ಕಂಡುಕೊಳ್ಳಲಾಗದ ಹಾಗೆ ಈ ನಕಲೀ ಸರವನ್ನು ಮಾಡಿಸಿದ್ದೇನೆ. ಇದನ್ನು ಬಡ್ಡೀ ವ್ಯಾಪಾರಿಯಾದ ಭೂಪಯ್ಯನ ಹತ್ತಿರ ಅಡವಿಟ್ಟು ಎಂಟು ನೂರು ರೂಪಾಯಿ ಪಡೆದಿದ್ದೇನೆ." ಎಂದು ರಂಗಯ್ಯನು ನಡೆದುದನ್ನೆಲ್ಲಾ ಹೇಳಿ, "ಈಗ ಇದು ಇಷ್ಟು ಕೈಗಳಿಗೆ ಹೋಗಿ ಮತ್ತೆ ನನ್ನ ಹತ್ತಿರವೇ ಬಂದಿದೆ. ಚಿಂತೆಯಿಲ್ಲ. ಬಂದುದರಲ್ಲಿ ಸ್ವಲ್ಪ ಲಾಭ ಹೋಯಿತೆಂದುಕೊಂಡರಾಯಿತು. ನೀನು ಈ ಸತ್ಯವನ್ನು ಬೇರೆಲ್ಲಿಯೂ ಹೇಳಿ ಬಿಡಬೇಡ" ಎಂದನು.

ಅದನ್ನೆಲ್ಲ ಕೇಳಿ ಗುರುವಯ್ಯ ನಗುತ್ತ, "ಇದರಲ್ಲಿ ನಷ್ಟ ಯಾರಿಗಾಗಿದೆ? ಎಲ್ಲರಿಗೂ ಲಾಭವೇ!" ಎಂದು ರಂಗಯ್ಯನೂ ನಕ್ಕನು.





# ಗಜರಾಜ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಕಾಶೀನಗರದ ಹೊರಭಾಗದಲ್ಲಿ ಬಡಗಿಗಳದೇ ಒಂದು ಗ್ರಾಮವಿತ್ತು. ಅಲ್ಲಿ ಐನೂರು ಮಂದಿ ಬಡಗಿಗಳು ತಮ್ಮ ತಮ್ಮ ಕುಟುಂಬದೊಂದಿಗೆ ವಾಸವಾಗಿದ್ದರು. ಅವರು ಚಿಕ್ಕಚಿಕ್ಕ ದೋಣಿಗಳಲ್ಲಿ ಕುಳಿತು ಗಂಗಾನದಿಯ ಆಚೆಗಿರುವ ಕಾಡುಗಳಿಗೆ ಹೋಗಿ, ಅಲ್ಲಿ ಮರಗಳನ್ನು ಕಡಿದು ತುಂಡು ತುಂಡು ಮಾಡಿ, ದೋಣಿಗಳಲ್ಲಿ ಹಾಕಿಕೊಂಡು ತರುತ್ತಿದ್ದರು. ಮುಗಿದ ಮೇಲೆ, ಎಲ್ಲರೂ ಕೂಡಿ ಮತ್ತೆ ಅರಣ್ಯಕ್ಕೆ ಮರದ ಕೊರಡು ಕಡಿದು ತರಲು ಹೋಗುವರು.

ಆ ಕಾಡಿನೊಳಗಿನ ಒಂದು ಮೂಲೆಯಲ್ಲಿ ಒಂದು ಹೆಣ್ಣಾನೆ ಇದ್ದಿತು. ಅದು ಜನರಿರುವ ಕಡೆಗೆ ಸುಳಿಯುತ್ತಿದ್ದಿಲ್ಲ. ಒಂದುದಿನ ಅದು ಕಾಡಿನೊಳಗೆ ತಿರುಗಾಡುತ್ತಿರುವಾಗ ಅದರ ಕಾಲಿನೊಳಗೆ ಒಂದು ಹರಿತವಾದ ಮರದ ಸೀಂಕೆ ಚುಚ್ಚಿಕೊಂಡಿತು. ಅದು ಬಹಳ ಆಳಕ್ಕೆ ಇಳಿದುಹೋದುದರಿಂದ ಪೇಚಾಡ ತೊಡಗಿತು ಆ ಹೆಣ್ಣಾನೆ. ಮರುದಿನ ಆ ಕಾಲು ಬಾವುತ್ತ ಸಿಡಿತ ಪ್ರಾರಂಭವಾಯಿತು.

ಆಗ ಅದಕ್ಕೆ ಬಡಗಿಗಳು ಮರವನ್ನು ಕಡಿಯುವ, ಒಡೆಯುವ, ಸಿಗಿಯುವ ಶಬ್ದವು ಕೇಳತೊಡಗಿತು. ಅದು ಕುಂಟುತ್ತಾ ಅವರ ಕಡೆಗೇ ಬರತೊಡಗಿತು.

ಮೆಲ್ಲನೆ ಬರುವ ಆನೆಯನ್ನು ನೋಡಿದ ಕೂಡಲೇ, ಅದಕ್ಕೇನೋ ನೋವು ಬಂದಿರುವುದನ್ನು ತಿಳಿದು ಬಡಗಿಗಳು ಮಾಡುವ ಕೆಲಸವನ್ನು ನಿಲ್ಲಿಸಿದರು. ಆನೆ ಬಂದು ಅವರ ಇದಿರಿನಲ್ಲಿ ಮಲಗಿಬಿಟ್ಟಿತು. ಬಾತು ಹೋದ ಅದರ ಕಾಲನ್ನು ನೋಡಿ, ಅದರಲ್ಲಿ ಏನೋ ಚುಚ್ಚಿಕೊಂಡಿರುವುದನ್ನು ತಿಳಿದು ಬಡಗಿಗಳು ತಮ್ಮ ಉಳಿ, ಆಣಿ ಮೊದಲಾದ ಸಾಧನಗಳಿಂದ ಉಪಾಯವಾಗಿ ಸೀಂಕೆಯನ್ನು ಹೊರಕ್ಕೆ ಎಳೆದು, ರೆಸಿಗೆಯನ್ನು ಒರೆಸಿ ಆ ಗಾಯಕ್ಕೆ ಚಿಕಿತ್ಸೆ ಮಾಡಿದರು.

ಬೇಗದಲ್ಲೇ ಆನೆಯ ಕಾಲು ಚೆನ್ನಾಯಿತು. ಅಂದಿನಿಂದ ಆ ಆನೆ ಬಡಗಿಗಳ ಹತ್ತಿರವೇ ಇರುತ್ತ, ಅವರಿಗೆ ಸಹಾಯಮಾಡ ತೊಡಗಿತು. ಅದು ಕಡಿದ ಮರಗಳನ್ನು ಎತ್ತಿ ಅವರ ಬಳಿಗೆ ತಂದು ಹಾಕುತ್ತಿತ್ತು. ಒಂದು ಸಾರಿಯಿಂದ ಇನ್ನೊಂದು ಸಾರಿಗೆ, ಒಂದು ವರ್ಷದಿಂದ ಇನ್ನೊಂದು ವರ್ಷಕ್ಕೆ ಬಡಗಿಗಳಿಗೂ ಆನೆಗಳಿಗೂ ನಡುವೆ ಸ್ನೇಹವು ಬೆಳೆಯಿತು.



ಐನೂರು ಮಂದಿ ಬಡಗಿಗಳೂ ತಮ್ಮ ಆಹಾರದಲ್ಲಿ ತಲಾ ಇಷ್ಟಿಷ್ಟನ್ನು ಸೇರಿಸಿ ಆನೆಗೆ ನೀಡುತ್ತಿದ್ದರು.

ಕಾಲಕ್ರಮದಲ್ಲಿ ಈ ಕಾಡಾನೆಗೆ ಒಂದು ಆನೆಮರಿ ಹುಟ್ಟಿತು. ಅದು ಬಿಳಿಯ ಬಣ್ಣದಲ್ಲಿರುವ ಐರಾವತ ಜಾತಿಯ ಆನೆಯಮರಿ. ತಾಯಿಯೊಂದಿಗೆ ಮಗುವಾನೆಯೂ ಬಡಗಿಯರೊಂದಿಗೆ ಆಟವಾಡಿ ಬೆಳೆಯುತಿದ್ದಿತು. ಕಾಲಕ್ರಮದಲ್ಲಿ ಆ ಹೆಣ್ಣಾನೆ ಮುದಿಯಾಯಿತು. ಒಂದುದಿನ ಅದು ಏನೋ ನಿಶ್ಚಯಿಸಿದಂತೆ ತನ್ನ ಮಗು ಆನೆಯನ್ನು ಬಡಗಿಯರ ಕಾಲ ಬಳಿಗೆ ದೂಡಿ, ತಾನು ಬೇಗಬೇಗನೆ ಹೊರಟು ಹೋಯಿತು. ಆಮೇಲೆ ಅದು ಹಿಂದಿರುಗಿ ಬರಲಿಲ್ಲ.

ಬಿಳಿಯ ಆನೆ ತಾಯಿಯ ಆಜ್ಞೆಯಂತೆ ಬಡಗಿಗಳಿಗೆ ಸಹಾಯ ಮಾಡುತ್ತ, ಅವರ ಮಕ್ಕಳನ್ನು ತನ್ನ ಬೆನ್ನಿನ ಮೇಲೆ ಹೊತ್ತು ತಿರುಗುತ್ತ, ನದಿಯಲ್ಲಿ ಸ್ನಾನ ಮಾಡಿಸುತ್ತ, ಆಟ ತೋರಿಸುತ್ತ ಉಲ್ಲಾಸದಿಂದ ಕಾಲಕಳೆಯುತ್ತಿದ್ದಿತು.

ಅಡವಿಯಲ್ಲೊಂದು ಬಿಳಿಯ ಆನೆ ಮನುಷ್ಯರೊಂದಿಗೆ ಸ್ನೇಹವಾಗಿರುವ ಸಂಗತಿ ಬ್ರಹ್ಮದತ್ತ ರಾಜನಿಗೆ ಗೊತ್ತಾಯಿತು. ಅದನ್ನು ಹೇಗಾದರೂ ಹಿಡಿದು ತರಬೇಕೆಂದು ಅವನು ಪರಿವಾರದೊಂದಿಗೆ ಅರಣ್ಯಕ್ಕೆ ಬಂದನು. ಬಡಗಿಗಳು ರಾಜನನ್ನು ನೋಡಿ ಮರದ ತುಂಡುಗಳಿಗಾಗಿಯೇ ರಾಜನು ಬಂದನೆಂದುಕೊಂಡು ವಿನಯದಿಂದ, "ಮಹಾಪ್ರಭೂ, ತಾವು ಶ್ರಮಪಟ್ಟು ಇಷ್ಟು ದೂರ ಬರಬೇಕಾಗಿದ್ದಿಲ್ಲ. ಒಂದು ಸುದ್ದಿ ಕಳಿಸುತ್ತಿದ್ದರೆ ತಮಗೆ ಬೇಕಾದ ಮರವನ್ನು ನಾವು ತಂದು ಒಪ್ಪಿಸುತ್ತಿದ್ದೆವು" ಎಂದರು.

"ನಾನು ಅದಕ್ಕಾಗಿ ಬರಲಿಲ್ಲ. ಈ ಬಿಳಿಯ ಆನೆಯನ್ನು ಒಯ್ಯಲಿಕ್ಕಾಗಿಯೇ ಬಂದಿದ್ದೇನೆ" ಎಂದನು ಬ್ರಹ್ಮದತ್ತರಾಜ.

"ಹಾಗಾದರೆ ತೆಗೆದುಕೊಂಡು ಹೋಗಿರಿ ಪ್ರಭೂ" ಎಂದರು ಬಡಗಿಗಳು.

ಆದರೆ ರಾಜನು ಎಷ್ಟೇ ಅಲ್ಲೆಮಾಡಿ, ಜೋರು ಮಾಡಿ ನೋಡಿದರೂ ಆ ಬಿಳಿಯಾನೆ ಕದಲಲಿಲ್ಲ. ಕಡೆಗೆ ರಾಜನೊಂದಿಗೆ ಬಂದಿದ್ದ ವಿವೇಕಿಯೊಬ್ಬನು, "ಮಹಾರಾಜರೇ, ಇದು ಸೂಕ್ಷ್ಮ ಮತಿಯುಳ್ಳ ಅವತಾರದ ಆನೆ. ಬಡಗಿಗಳಿಗೆ ತಕ್ಕ ಪರಿಹಾರ ಕೊಟ್ಟರೆ ಹೊರತು ಇದು ಕದಲಲಾರದು" ಎಂದನು.

ಅದು ನಿಜವೆಂದು ಅನುಮೋದಿಸಿ ರಾಜನು ಆನೆಯ ನಾಲ್ಕು ಕಾಲುಗಳ ಹತ್ತಿರವೂ, ಸೊಂಡಿಲಿನ ಹತ್ತಿರವೂ ಒಂದೊಂದು ಲಕ್ಷ ವರಹಗಳನ್ನು ಇರಿಸಿ, ಬಡಗಿಗಳಿಗೆ ತೆಗೆದುಕೊಳ್ಳುವಂತೆ ಹೇಳಿದನು. ಆಗಲೂ ಆನೆ ಕದಲಲಿಲ್ಲ. ಬಡಗಿಯರ ಹೆಂಡತಿ ಮಕ್ಕಳಿಗೆಲ್ಲ ಹೊಸ ಬಟ್ಟೆಗಳನ್ನು ತರಿಸಿ ಕೊಟ್ಟ ಮೇಲೆ, ಅದು ರಾಜನ ಹಿಂದೆ ಹೊರಟಿತು.

ರಾಜನು ಆನೆಯನ್ನು ಮೇಳತಾಳಗಳೊಂದಿಗೆ ನಗರದೊಳಗೆ ಕರೆದುಕೊಂಡು ಹೋದನು. ಅಲಂಕೃತವಾದ ಬೀದಿಗಳಲ್ಲಿ ಆನೆಯನ್ನು ಅಲಂಕರಿಸಿ

ಮೆರೆವಣಿಗೆ ಮಾಡಲಾಯಿತು. ಆಮೇಲೆ ಅದನ್ನು ಪ್ರತ್ಯೇಕವಾದ ಶಾಲೆಯಲ್ಲಿ ಇರಿಸಲಾಯಿತು. ಅದು ರಾಜನ ಪಟ್ಟದಾನೆಯಾಯಿತು. ಅದರ ಮೇಲೆ ರಾಜನ ಹೊರತು ಮತ್ತಾರೂ ಏರುವಂತಿಲ್ಲ. ಈ ಆನೆ ರಾಜಧಾನಿಗೆ ಬಂದ ಮೇಲೆ ಕಾಶೀರಾಜ್ಯವು ಬಹಳ ವಿಸ್ತಾರವಾಯಿತು. ಅದರ ಪ್ರಭಾವದಿಂದ ಬಲವಂತರಾದ ರಾಜರು ಕೂಡಾ ಕಾಶೀರಾಜನಿಂದ ಸೋಲಿಸಲ್ಪಟ್ಟರು.

ಸ್ವಲ್ಪಕಾಲದ ಮೇಲೆ ಅದುವರೆಗೂ ಸಂತಾನ ವಿಲ್ಲದ ಮಹಾರಾಣಿ ಗರ್ಭವತಿಯಾದಳು. ಬೋಧಿ ಸತ್ವನು ಅವಳ ಗರ್ಭವನ್ನು ಪ್ರವೇಶಿಸಿದನು. ಇನ್ನೊಂದು ವಾರದಲ್ಲಿ ರಾಣಿ ಪ್ರಸವಿಸುವಳೆಂದಿರುವಾಗ, ಆ ಭಾಗ್ಯ ನೋಡುವ ಯೋಗವಿಲ್ಲದೆ, ರಾಜನು ಅಕಸ್ಮಾತ್ತಾಗಿ ಶೀರಿಹೋದನು. ಇದೇ ಸರಿಯಾದ ಸಮಯವೆಂದುಕೊಂಡು ಕೋಸಲ ದೇಶದ ರಾಜನು, ತನ್ನ ದೊಡ್ಡ ಸೈನ್ಯವನ್ನು ಸಾಗಿಸಿಕೊಂಡು ಕಾಶೀರಾಜ್ಯದ ಮೇಲೆ ದಂಡೆತ್ತಿ ಬಂದನು. ಏನು ಮಾಡಬೇಕೆಂದು ಮಂತ್ರಿಗಳಿಗೆ ಗೊತ್ತಾಗದೆ ಚಡಪಡಿಸತೊಡಗಿದರು. ಅವರು ತಮ್ಮೊಳಗೆ ಚರ್ಚೆ ಮಾಡಿಕೊಂಡು, ಕಡೆಗೆ ಕೋಸಲರಾಜನಿಗೆ ಹೀಗೆ ಸಮಾಚಾರ ಕಳುಹಿಸಿದರು: "ನಮ್ಮ ರಾಣಿ ಇನ್ನೊಂದೆರಡು ವಾರಗಳಿಗೆ ಪ್ರಸವಿಸುವ ಸ್ಥಿತಿಯಲ್ಲಿದ್ದಾರೆ. ಆಕೆ ಹೆಣ್ಣು ಮಗುವನ್ನು ಹೆತ್ತರೆ ನೀವು ಬಂದು ಕಾಶೀರಾಜ್ಯವನ್ನು ವಶಪಡಿಸಿಕೊಳ್ಳಬಹುದು. ಗಂಡುಮಗು ಹುಟ್ಟಿದ ಪಕ್ಷದಲ್ಲಿ ನಾವು ನಿಮ್ಮೊಂದಿಗೆ ಯುದ್ಧ ಮಾಡುತ್ತೇವೆ."

ಕೋಸಲರಾಜನು ಈ ಸಮಾಚಾರವನ್ನು ಒಪ್ಪಿಕೊಂಡು, ಕಾದುಕೊಂಡಿದ್ದನು.

ಒಂದು ವಾರ ಕಳೆಯುವಷ್ಟರಲ್ಲಿ ರಾಣಿ ಬೋಧಿಸತ್ವನನ್ನು ಪ್ರಸವಿಸಿದಳು. ಆದುದರಿಂದ ಕಾಶಿಯ ಸೇನೆಗಳು ಕೋಸಲದ ಸೈನ್ಯದೊಂದಿಗೆ ಕದನ ಹೂಡಬೇಕಾಯಿತು. ಯುದ್ಧವು ಪ್ರಾರಂಭವಾದ ಮೇಲೆ ಕೋಸಲದವರ ಕೈಯೇ ಮೇಲಾಗು



ವಂತೆ ತೋರಿತು. ಆಗ ಮಂತ್ರಿಗಳು ಮಹಾರಾಣಿಯ ಬಳಿಗೆ ಹೋಗಿ, "ಅಮ್ಮಾ, ನಮ್ಮ ಪಟ್ಟದಾನೆ ಯುದ್ಧರಂಗವನ್ನು ಪ್ರವೇಶಿಸಿದ ಹೊರತು ನಮಗೆ ವಿಜಯವಾಗದು. ಆದರೆ ಮಹಾರಾಜರು ತೀರಿಕೊಂಡಂದಿನಿಂದ ಆ ಆನೆ ನಿದ್ರಾಹಾರಗಳನ್ನು ಬಿಟ್ಟು ದುಃಖದಲ್ಲಿ ಮುಳುಗಿದೆ. ಏನು ಮಾಡುವುದೆಂದು ನಮಗೆ ಗೊತ್ತಾಗದೆ ಮಿಡುಕುತ್ತಿದ್ದೇವೆ" ಎಂದು ಬಿನ್ನವಿಸಿಕೊಂಡರು.

ಆ ಮಾತು ಕೇಳಿದ ಕೂಡಲೇ ಬಾಣಂತಿಯಾಗಿದ್ದ ರಾಣಿ ಮಂಚದಿಂದ ಎದ್ದಳು. ತನ್ನ ಪುಟ್ಟ ಕುಮಾರನಿಗೆ ರಾಜೋಚಿತವಾದ ದುಸ್ತುಗಳನ್ನು ತೊಡಿಸಿ, ಎತ್ತಿ ತಂದು ಪಟ್ಟದಾನೆಯ ಕಾಲಬುಡದಲ್ಲಿಟ್ಟು, ನಮಸ್ಕಾರಮಾಡಿ, "ಅಯ್ಯಾ ಗಜರಾಜಾ ! ನಿನ್ನ ಯಜಮಾನರು ಇಲ್ಲದೇ ಹೋದರೆಂದು ಇನ್ನು ಚಿಂತೆ ಮಾಡಬಾರದಯ್ಯಾ. ಇಗೋ, ಇವನೇ ನಿನ್ನ ಯಜಮಾನ ! ಇವನ ಶತ್ರುಗಳು ಯುದ್ಧರಂಗದಲ್ಲಿ ಮುನ್ನುಗ್ಗಿ ಬರುತ್ತಿದ್ದಾರೆ. ನೀನೇ ಹೋಗಿ ಅವರನ್ನು ಓಡಿಸಬೇಕು. ಇಲ್ಲದಿದ್ದರೆ ನಿನ್ನ ಕಾಲಿನಿಂದ ಈ ಶಿಶುವನ್ನು ಮೆಟ್ಟಿ ಕೊಂದುಬಿಡು !" ಎಂದಳು ಕಣ್ಣೀರು ಸುರಿಸುತ್ತಾ.

ಅದುವರೆಗೂ ಸ್ತಬ್ಧವಾಗಿ ಚಿಂತಿಸುತ್ತಿದ್ದ ಆನೆ, ರಾಜಕುಮಾರನ ಶರೀರವನ್ನು ಸೊಂಡಿಲಿನಿಂದ ನಯವಾಗಿ ಪೂಸಿ, ಎತ್ತಿ ತನ್ನ ತಲೆಯ ಮೇಲೆ ಹೊತ್ತು, ಅಲ್ಲಿಂದೆತ್ತಿ ತಾಯಿಯ ಕೈಗಳಲ್ಲಿಟ್ಟಿತು. ಆಮೇಲೆ ಸೊಂಡಿಲೆತ್ತಿ ಘೀಂಕಾರಮಾಡಿ, ಯುದ್ಧರಂಗದ ಕಡೆಗೆ ಬೇಗಬೇಗನೆ ಹೋಯಿತು.

ಭೀಕರವಾಗಿ ಘೀಂಕರಿಸಿಕೊಂಡು ವಾಯುವೇಗದಿಂದ ಬರುವ ಬಿಳೀ ಆನೆಯನ್ನು ನೋಡಿ, ಕೋಸಲದ ಸೈನಿಕರ ಗುಂಡಿಗೆಗಳು ಧಡಧಡಿಸಿದುವು. ಕೈಕಾಲು ನಡುಗಿ ಪ್ರಯೋಗಿಸಿದ ಆಯುಧಗಳು ಬಲಗುಂದಿ ಜಾರಿಬಿದ್ದುವು. ಅವರೆಲ್ಲ ಆರ್ತನಾದ ಮಾಡುತ್ತ ಚೆಲ್ಲಾಚೆದರಾಗಿ ಓಡಲು, ಆನೆ ಸೀದಾ ಕೋಸಲರಾಜನ ಬಳಿಗೇ ಹೋಯಿತು. ಅವನನ್ನು ಸೊಂಡಿಲಿನಿಂದ ಸುತ್ತಿ ಎತ್ತಿಕೊಂಡು ಬಂದು, ರಾಜಕುಮಾರನ ಪಾದಗಳ ಕೆಳಗೆ ಹೊರಳಿಸಿತು. ಕೋಸಲರಾಜನು ಮಗುವಿನ ಕಾಲುಗಳನ್ನು ಮುಟ್ಟಿ ಕ್ಷಮೆ ಕೇಳಿಕೊಂಡನು. ಮಂತ್ರಿಗಳು ಅವನಿಗೆ ಯಾವ ಅಪಕಾರವನ್ನೂ ಮಾಡದೆ, ಅವನ ಘಾತುಕತೆಯನ್ನು ಕ್ಷಮಿಸಿ, ಅವನ ದೇಶಕ್ಕೆ ಹೋಗಲು ಬಿಟ್ಟರು.

ಬೋಧಿಸತ್ವನಿಗೆ ಏಳು ವಯಸ್ಸು ಆಗುವವರೆಗೂ ಆನೆಯೇ ರಾಜ್ಯವನ್ನು ಕಾಪಾಡಿತು. ಆಮೇಲೆ ಬೋಧಿಸತ್ವನು ಸಿಂಹಾಸನಕ್ಕೇರಿ, ಆ ಆನೆಯನ್ನು ಪಟ್ಟದಾನೆಯಾಗಿ ಮಾಡಿಕೊಂಡನು.





# ಗುರುನಾನಕ್

ಲಾಹೋರಿನ ಸಮೀಪದಲ್ಲಿ ಪ್ರಸ್ತುತ ನಾನ್ಕಾನಾ ಎಂದು ಪ್ರಸಿದ್ಧಿ ಪಡೆದ ತಲ್ವಾನ್‌ಡೀ ಗ್ರಾಮದಲ್ಲಿ ತೃಪ್ತಾ ಮತ್ತು ಕಲ್ಯಾಣ್‌ಚಂದ್ ಎಂಬ ದಂಪತಿಗಳಿಗೆ ೧೪೬೯ರ ಏಪ್ರಿಲ್ ೧೫ರ ದಿನ ಒಂದು ಗಂಡು ಮಗು ಹುಟ್ಟಿತು. ಆ ಮಗು ಭವಿಷ್ಯತ್ತಿನಲ್ಲಿ ಮಹಾಪುರುಷನಾಗುವನೆಂದು ಹೇಳಿ ಜೋಯಿಸರು ಆ ಶಿಶುವಿಗೆ ನಾನಕ್ ಎಂದು ನಾಮಕರಣ ಮಾಡಿದರು.

ಮಗು ಬೆಳೆದು ಬಾಲಕನಾಗಿ ಶಾಲೆಗೆ ಹೋಗಲು ಪ್ರಾರಂಭಿಸಿದನು. ಒಂದು ದಿನ ತರಗತಿಯಲ್ಲಿ ಉಪಾಧ್ಯಾಯರು ಹುಡುಗರಿಗೆ ಅಕಾರಾದಿ ಅಕ್ಷರಗಳನ್ನು ಹೇಳಿಕೊಡುತ್ತಿರುವಾಗ, ಬಾಲ ನಾನಕ್ ಅದನ್ನೇನೂ ಹಚ್ಚಿಕೊಳ್ಳದೆ, ತನ್ನ ಪಾಡಿಗೆ ಕರಿಹಲಗೆಯ ಮೇಲೆ ಬಳಪದಿಂದ ಏನೋ ಬರೆಯುತ್ತಲೇ ಇದ್ದನು. ಉಪಾಧ್ಯಾಯರು ಹತ್ತಿರ ಹೋಗಿ ನೋಡಿದರೆ, ಕರಿಹಲಗೆಯಲ್ಲಿ ದೇವರ ಮೇಲೆ ಪೂರ್ತಿಯಾದ ಒಂದು ಪ್ರಾರ್ಥನಾಗೀತವನ್ನು ಬರೆದಿದ್ದನು. ಈ ಅದ್ಭುತ ನೋಡಿ ಉಪಾಧ್ಯಾಯರಿಗೆ ಆಶ್ಚರ್ಯವಾಯಿತು.





ತಂದೆಯಾದ ಕಲ್ಯಾಣಚಂದ್ ಕುಮಾರನನ್ನು ವ್ಯಾಪಾರಕ್ಕೆ ಇಳಿಸಬೇಕೆಂದು ಪ್ರಯತ್ನಿಸಿದನು, ಒಂದು ದಿನ ನಾನಕನ ಕೈಗೆ ಹಣ ಕೊಟ್ಟು, ಪಟ್ಟಣದಲ್ಲಿ ವ್ಯಾಪಾರ ಮಾಡಲು ಸರಕುಗಳನ್ನು ತರಲು ಕಳುಹಿಸಿದನು. ಕಾಡುದಾರಿಯಲ್ಲಿ ಹೋಗುತ್ತಿದ್ದ ನಾನಕ್, ಕೆಲವು ಸಾಧುಗಳು ಹಸಿವಿನಿಂದ ನರಳುತ್ತಿರುವುದನ್ನು ನೋಡಿದನು. ತಂದೆ ಕೊಟ್ಟ ಹಣದಿಂದ ಆಹಾರ ಪದಾರ್ಥಗಳನ್ನು ಕೊಂಡುಕೊಂಡು ತಂದು, ಆ ಸಾಧುಗಳಿಗೆ ಹಂಚಿಕೊಟ್ಟು ಬಿಟ್ಟನು.



ಮದುವೆ ಮಾಡಿದರಾದರೂ ಸಂಸಾರ ಜೀವಿತದಲ್ಲಿ ಆಸಕ್ತಿ ತೋರಿಸುವನೆಂಬ ಉದ್ದೇಶದಲ್ಲಿ ಕಲ್ಯಾಣಚಂದ್ ನಾನಕನಿಗೆ ಮದುವೆ ಮಾಡಿದನು. ನಾನಕನು ಇಬ್ಬರು ಮಕ್ಕಳ ತಂದೆಯಾದನೇ ಹೊರತು, ಆವನ ಆಲೋಚನೆ ಮಾತ್ರ ಲೌಕಿಕ ಜೀವನದ ಕಡೆಗೆ ತಿರುಗಲೇ ಇಲ್ಲ. ಯಾವಾಗಲೂ ಏನೋ ಭಕ್ತಿ ಗೀತೆಗಳ ರಚನೆಯಲ್ಲಿಯೇ ಲೀನನಾಗಿರುವನು. " ಮೇಲಿನಿಂದ ನನಗೆ ಬರುವ ಸಂದೇಶಗಳನ್ನೇ ಬರೆಯುತ್ತೇನೆ " ಎಂದು ಹೇಳುತ್ತಿದ್ದನು.

ಒಂದು ದಿನ ನಾನಕ್ ಹೆಂಡತಿಯೊಂದಿಗೆ " ಎಲ್ಲರನ್ನೂ ಕಾಪಾಡುವ ದೇವನೇ ನಿನ್ನನ್ನೂ ಕಾಪಾಡುತ್ತಾನೆ " ಎಂದು ಹೇಳಿ ದೇಶಾಟನೆ ಮಾಡಲು ಹೊರಟನು. ಭಾರತದೇಶದೊಳಗಿನ ಪವಿತ್ರ ಕ್ಷೇತ್ರಗಳನ್ನು ಮಾತ್ರವಲ್ಲದೆ, ಮರ್ದನ್ ಎಂಬ ಮುಸ್ಲಿಮ್ ಮಿತ್ರನ ಜತೆಯಲ್ಲಿ, ನೇಪಾಳ, ಟಿಬೆಟ್, ಮಕ್ಕಾ, ಮದೀನಾ ಮೊದಲಾದ ಸ್ಥಳಗಳಿಗೂ ತೀರ್ಥಯಾತ್ರೆ ಮಾಡಿದನು.





ಹೃದಯಪೂರ್ವಕವಾದ ಭಕ್ತಿವಿಶ್ವಾಸಗಳಿಲ್ಲದೆ ಕೇವಲ ಮೇಲುಮೇಲಾದ ಮತಾಚಾರಗಳನ್ನು ಹಿಡಿದುಕೊಂಡಿರುವ ಜನತೆಯನ್ನು ನೋಡಿ ನಾನಕ್ ನೊಂದುಕೊಂಡನು. ಒಂದು ಸಾರಿ ಹರಿದ್ವಾರದ ಬಳಿಯಲ್ಲಿ ಪೂರ್ವ ದಿಕ್ಕಿಗೆ ತಿರುಗಿ ಜಲತರ್ಪಣ ಮಾಡುವವರನ್ನು ನೋಡಿ, ಆವನು ಪಶ್ಚಿಮ ದಿಕ್ಕಿಗೆ ತಿರುಗಿ ತರ್ಪಣ ಕೊಡಲು ಪ್ರಾರಂಭಿಸಿದನು. " ಹೀಗೇಕೆ ಮಾಡುವಿ ?" ಎಂದು ಕೇಳಿದುದಕ್ಕೆ " ಲಾಹೋರಿನ ಹತ್ತಿರವಿರುವ ನಮ್ಮ ಮರಗಳಿಗೆ ನೀರು ಎರೆಯುತ್ತಿದ್ದೇನೆ. ನೀವು ಕೊಡುವ ಅರ್ಘ್ಯವು ಪೂರ್ವ ದಿಕ್ಕಿನ ದೇವರಿಗೆ ಸೇರಿದರೆ, ನಾನು ಕೊಡುವ ನೀರು ಮಾತ್ರ ನನ್ನ ತೋಟಕ್ಕೆ ಹೋಗದೇ ?" ಎಂದನು ನಾನಕ್.

ಒಂದು ಸಾರಿ ನಾನಕ್ ಸೈಯದ್‌ಪುರದಲ್ಲಿ ಬಡವನ ಮನೆಗೆ ಅತಿಥಿಯಾಗಿ ಹೋದನು. ಅದೇ ಸಮಯದಲ್ಲಿ ಒಬ್ಬ ಧನಿಕನು ಬಂದು ತನ್ನ ಮನೆಯ ಔತಣದ ಭೋಜನಕ್ಕೆ ಬರುವಂತೆ ಅವನನ್ನು ಕರೆದನು. ನಾನಕ್ ಬಡವನು ಕೊಟ್ಟ ರೊಟ್ಟಿ ತುಂಡನ್ನು ಬಲಗೈಯಲ್ಲಿ ಹಿಡಿದು ಕೊಂಡು, ಧನಿಕನು ಕೊಟ್ಟ ರಸಭಕ್ಷ್ಯವನ್ನು ಎಡಗೈಯಲ್ಲಿ ಹಿಡಿದು ಎರಡನ್ನೂ ಹಿಂಡಿದನು. ರೊಟ್ಟಿಯಿಂದ ಹಾಲೂ, ಎಡಗೈಯ ಭಕ್ಷ್ಯ ದಿಂದ ನೆತ್ತರೂ ಸುರಿಯಿತಂತೆ !





ಮಕ್ಕಾದಲ್ಲಿರುವಾಗ ನಾನಕ್ ಒಂದು ಸಾರಿ ಕಾಬಾದ ಕಡೆಗೆ ಕಾಲುಚಾಚಿ ಮಲಗಿದನು. ಕಾಜೀ ಅದನ್ನು ನೋಡಿ, "ದೇವಾಲಯದ ಕಡೆಗೆ ಕಾಲುಚಾಚಿ ಮಲಗಿದೆ ಏಕೆ ?" ಎಂದು ಕೇಳಿದನು. ಕೂಡಲೇ ನಾನಕ್ "ನನ್ನ ಕಾಲನ್ನು ತೆಗೆದು ದೇವನ ಆಲಯವಿಲ್ಲದ ಕಡೆಗೆ ನೀವೇ ಸ್ವಲ್ಪ ತಿರುಗಿಸಿಬಿಡಿ" ಎಂದನು. ನಾನಕನ ಕಾಲನ್ನು ಯಾವ ಕಡೆಗೆ ತಿರುಗಿಸಿದರೂ ಆ ಕಡೆಯಲ್ಲಿ ಕಾಜೀಗೆ ಕಾಬಾ ಕಾಣಿಸಿತಂತೆ.

ಪ್ರತಿಯೊಬ್ಬರೂ ಸಹನೆಯನ್ನೂ, ದಯೆಯನ್ನೂ ಅಭ್ಯಾಸ ಮಾಡಿಕೊಳ್ಳಬೇಕೆಂದು ನಾನಕ್ ಪ್ರಚಾರ ಮಾಡಿದರು. ಕೇವಲ ಮೇಲು ಮೇಲಿನ ಆಚಾರಗಳಿಂದ ಹೊರಬಿದ್ದು, ಹೃದಯ ನೈರ್ಮಲ್ಯವನ್ನು ಅಳವಡಿಸಿಕೊಂಡು, ಸತ್ಯ ಸ್ವರೂಪನಾದ ದೇವನ ಮೇಲೆ ಪ್ರೇಮವನ್ನು ವರ್ಧಿಸಿಕೊಳ್ಳಬೇಕೆಂದು ಗುರುನಾನಕ್ ಬೋಧಿಸಿದರು. ಜಾತಿ ಭೇದಗಳನ್ನು ನಿರಸನ ಮಾಡಿದ ನಾನಕರ ಬೋಧನೆಗಳು ಹಿಂದೂ ಮುಸ್ಲಿಮ್ ಉಭಯ ಮತದವರನ್ನೂ ಉದ್ದೇಶಿಸಲ್ಪಟ್ಟಿದು.





ನಾನಕರ ಬೋಧನೆಗಳೆಲ್ಲ ಸಿಖ್ಖ ಮತವೆಂದು ಪ್ರಚಾರವಾಯಿತು. ನಾನಕ್ ತಮ್ಮ ಪ್ರಥಮ ಶಿಷ್ಯನಾದ ಅಂಗದನನ್ನು ತನ್ನ ಆಧ್ಯಾತ್ಮಿಕ ವಾರಸನನ್ನಾಗಿ ನಿಯಮಿಸಿದರು. ಸತ್ಯವೇ ಲಕ್ಷ್ಯವಾಗಿ ಭಾವಿಸಿ, ಉಜ್ವಲ ಜೀವಿತವನ್ನು ಕಳೆದ ಆ ಮಹನೀಯರು ೧೫೩೯ನೇ ವರ್ಷ ಸೆಪ್ಟೆಂಬರ್ ಏಳರ ದಿನ ತನ್ನ ಭೌತಿಕ ದೇಹವನ್ನು ತ್ಯಜಿಸಿದರು.

ನಾನಕರ ಭಕ್ತರು ನಿರ್ಮಿಸಿದ ಸ್ಮಾರಕಮಂದಿರವು ರಾವಿನದಿಯ ಪ್ರವಾಹದಿಂದ ಕೊಚ್ಚಿ ಹೋಯಿತು. ಪ್ರಧಾನವಾದುದು ಲಕ್ಷ್ಯವೇ ಹೊರತು ಭೌತಿಕ ಚಿಹ್ನೆಗಳು ಅಲ್ಲವೆಂಬ ಗುರುವಿನ ಅಭೀಷ್ಟದ ಮೇರೆಗೇ ಹಾಗಾಯಿತೆಂದು ನಾನಕರ ಭಕ್ತರು ನಂಬುತ್ತಾರೆ. ಅವರು ಹೇಳಿದ ಗೀತಾ ರಚನೆಗಳು "ಗ್ರಂಥ್ ಸಾಹೇಬ್" (ಆದಿಗ್ರಂಥ) ಎಂಬ ಹೆಸರಿನಿಂದ ಚಿರಸ್ಥಾಯಿಯಾಗಿ ನಿಂತಿವೆ.





ನಾನಕರ ಸ್ಮೃತಿ ಚಿಹ್ನೆಯಾಗಿ ಅವರ ಶಿಷ್ಯರು ನದೀತೀರದಲ್ಲಿ ಡೇರಾಬಾಬಾ ನಾನಕ್ ಎಂಬ ಪಟ್ಟಣವನ್ನು ನಿರ್ಮಿಸಿದ್ದಾರೆ. ಒಂದು ಕಾಲದಲ್ಲಿ ನಾನಕ್ ಧ್ಯಾನಮಗ್ನರಾಗಿ ಆಸೀನರಾಗಿದ್ದ ಸ್ಥಳದಲ್ಲಿ ಒಂದು ಮಂದಿರವನ್ನೂ ನಿರ್ಮಿಸಿದ್ದಾರೆ. ಗುರುನಾನಕರ ತರುವಾಯ ಅವರ ಎಂಟು ಮಂದಿ ಶಿಷ್ಯರೂ, ಪ್ರಶಿಷ್ಯರೂ ಉತ್ತಮವಾದ ಸಂಪ್ರದಾಯವನ್ನು ನೆಲೆಗೊಳಿಸಿದರು.

# ಬೆಲೆಯ ವ್ಯತ್ಯಾಸ

**ಗೋ**ಪಣ್ಣನೆಂಬ ಯುವಕನೊಬ್ಬನು ಕೇಶೀಪಾಳ್ಯದ ಅನೇಕ ಜನರಿಗೆ ಹಾಲನ್ನು ಸರಬರಾಯಿ ಮಾಡುತ್ತ, ಆದರಿಂದ ಬಂದ ಆದಾಯದಿಂದ ಸುಖವಾಗಿ ಜೀವನಯಾತ್ರೆ ಸಾಗಿಸಿಕೊಂಡಿದ್ದನು.

ಸಮೀಪದಲ್ಲಿದ್ದ ವೀರಪಾಳ್ಯದಲ್ಲಿ ಕೂಡಾ ಅವನಿಗೆ ಹಾಲಿನ ವ್ಯಾಪಾರವಿದ್ದಿತು. ಪ್ರತಿ ದಿನಾ ಅಲ್ಲಿಗೂ ಹೋಗಿ ಹಾಲುಮಾರಿ ಹಿಂದಿರುಗುತ್ತಿದ್ದನು.

ಒಂದು ದಿನ ಪರಮೇಶನೆಂಬ ಕೇಶೀಪಾಳ್ಯದವನು ವೀರಪಾಳ್ಯಕ್ಕೆ ಹೋಗಿದ್ದಾಗ, ಅಲ್ಲಿ ಗೋಪಣ್ಣನು ಕೇಶೀಪಾಳ್ಯದವರಿಗಿಂತಲೂ ಅಗ್ಗದ ಬೆಲೆಯಲ್ಲಿ ಹಾಲು ಮಾರುವುದನ್ನು ನೋಡಿದನು. ತನ್ನ ಊರಿನಲ್ಲಿ ಪರಮೇಶನು ಕೂಡಾ ಗೋಪಣ್ಣನಿಂದಲೇ ಹಾಲ ಗೆದುಕೊಳ್ಳುವನು. ಆದರೆ ಇಲ್ಲಿ ಕಡಿಮೆ ಬೆಲೆಗೆ ಹಾಲು ಮಾರುತ್ತಿದ್ದಾನೆ. ಏಕೆ ?

ಅಂತಲೇ ಪರಮೇಶನು ಗೋಪಣ್ಣನೊಂದಿಗೆ, "ಇದು ತುಂಬ ಅನ್ಯಾಯ. ನಮ್ಮ ಊರಿನವನಾಗಿ ನಮ್ಮ ಊರಿನವರಿಗೆ ಹೆಚ್ಚಿನ ಬೆಲೆಗೂ, ಈ ಊರಿನಲ್ಲಿ ಕಡಿಮೆ ಬೆಲೆಗೂ ಹಾಲು ಮಾರುವುದೆಂದರೇನು ?" ಎಂದು ಕೋಪದಿಂದ ಕೇಳಿದನು.

ಗೋಪಣ್ಣ ಒಂದಿಷ್ಟೂ ಶಂಕಿಸದೆ, "ನಮ್ಮ ಊರಿನಲ್ಲಿರುವ ನೀರಿನ ಕಷ್ಟ ನಿಮಗೆ ಗೊತ್ತಿಲ್ಲದ್ದೇನಲ್ಲ ವಷ್ಟೆ ? ಇನ್ನು ಈ ವೀರಪಾಳ್ಯದಲ್ಲಿ ಎಲ್ಲಿ ನೋಡಿದರೂ ನೀರಿದೆ. ಹಾಲಿನ ಬೆಲೆಯಲ್ಲಿ ಬರುವ ವ್ಯತ್ಯಾಸಕ್ಕೆ ಅದೇ ಮೂಲಕಾರಣ" ಎಂದನು.





# ಸಹಜವಾದ ಶಂಕೆ

**ಹಿಂ**ದೆ ಒಬ್ಬರು ಜಮೀನ್ದಾರರಿದ್ದರು. ಗೋವಿಂದ ರಾಜ ಪ್ರಭುಗಳೆಂದು ಅವರ ಹೆಸರು. ಅವರ ದಿವಾಣದಲ್ಲಿ ವರದನೆಂಬವನು ಚಿಕ್ಕದೊಂದು ಉದ್ಯೋಗದಲ್ಲಿದ್ದನು. ಹಾಗಿದ್ದರೂ ಅವನಿಗೆ ಹಣದ ಕಷ್ಟವಿರುವಂತೆ ಕಾಣುತ್ತಿರಲಿಲ್ಲ. ತಾನು ತೃಪ್ತಿ ಸಂತೋಷಗಳಿಂದಿರುತ್ತ, ಅದರ ಮೇಲೆ ಇತರ ಸಹೋದ್ಯೋಗಿಗಳಿಗೆ ಅಗತ್ಯಬಿದ್ದಾಗ ಐದೋ ಹತ್ತೋ ಕೈಗಡ ಕೊಟ್ಟು ಸಹಕರಿಸುತ್ತಿದ್ದನು. ಅವನು ಕೆಲಸಕ್ಕೆ ಸೇರಿ ಹತ್ತು ವರ್ಷ ತುಂಬುವುದರೊಳಗೆ. ನಗರದೊಳಗೆ ಚಿಕ್ಕದೊಂದು ಮನೆಯನ್ನು ಕೂಡಾ ಕೊಂಡುಕೊಂಡನು. ಇಬ್ಬರು ಗಂಡು ಮಕ್ಕಳಿಗೆ ಚೆನ್ನಾಗಿ ಓದಿಸಿದ್ದನು. ಒಳ್ಳೆಯ ಕಡೆಯ ಸಂಬಂಧ ನೋಡಿ ಮಗಳಿಗೆ ಮದುವೆ ಕೂಡಾ ಮಾಡಿದನು.

ಸಣ್ಣ ಉದ್ಯೋಗದಲ್ಲಿರುವ ವರದನು ಇಷ್ಟೆಲ್ಲವನ್ನೂ ಹೇಗೆ ಮಾಡಲು ಸಾಧ್ಯವಾಯಿತೆಂದು ಅವನ ಸಹೋದ್ಯೋಗಿಗಳಿಗೆ ಗೊತ್ತಾಗದೆ ಆಶ್ಚರ್ಯಪಡುತ್ತಿದ್ದರು. ಅವರೆಲ್ಲರೂ ಹಣದ ಕಷ್ಟದಲ್ಲಿರುವವರು. ಸಂಸಾರ ತಾಪತ್ರಯಗಳೊಂದಿಗೆ ಯಾವಾಗಲೂ ಹೋರಾಡಿಕೊಂಡಿರುವವರು. ತಿಂಗಳಾಖೈರಿಗೆ ಕೈಗಡಕ್ಕೆ ಕೈ ನೀಡುವವರು.

ಅವರು ವರದನ ಮೇಲೆ ಬಗೆಬಗೆಯ ಪುಕಾರುಗಳನ್ನು ಹೊರಳಿಸುತ್ತ ವದಂತಿ ಹುಟ್ಟಿಸಿದರು. ದಿವಾಣಕ್ಕೆ ಕೆಲಸ ಮಾಡಿಸಿಕೊಳ್ಳಲು ಬರುವವರಿಂದ ವರದನು ಲಂಚಪಡೆಯುವನೆಂದು ಆ ಪುಕಾರುಗಳಲ್ಲೊಂದು. ಚೆಂಗಯ್ಯನೆಂಬವನು ಜಮೀನುದಾರರ ಪ್ರಧಾನ ನೌಕರ. ಅವನು ಈ ವದಂತಿಯನ್ನು ಯಜಮಾನರ ಕಿವಿಗೆ ಹಾಕಿದನು.

"ಹಾಗೆಂದು ಖಂಡಿತ ಹೇಗೆ ಹೇಳುತ್ತೀ ? ವರದನು ಲಂಚ ತೆಗೆದುಕೊಳ್ಳುವಾಗ, ನೋಡಿದಿಯಾ? " ಎಂದು ಜಮೀನುದಾರರು ಚೆಂಗಯ್ಯನನ್ನು ಕೇಳಿದರು.

"ಅಯ್ಯಾ, ಬೆಂಕಿಯಿಲ್ಲದೆ ಹೊಗೆ ಬರುವುದಿಲ್ಲ ಅನ್ನುತ್ತಾರಷ್ಟೆ ? ಒಂದುದಿನ ನೀವೇ ಅವರನ್ನು ಬಂದೀಖಾನೆಗೆ ದೂಡುವಿರೆಂದೇ ನನಗೆ ಕಾಣುತ್ತೆ." ಎಂದನು ಚೆಂಗಯ್ಯ.

ಕೂಡಲೇ ಜಮೀನುದಾರರು ತಮ್ಮ ದಿವಾನನನ್ನು ಬರಮಾಡಿಸಿ, ವರದಯ್ಯನ ನಡತೆಯನ್ನು

ಜಿ. ರತ್ನ

ಕುರಿತು ಪರೀಕ್ಷೆಮಾಡಿ, ನಿಜಸಂಗತಿ ಏನೆಂಬುದನ್ನು ತಿಳಿದುಕೊಳ್ಳುವಂತೆ ಆದೇಶ ಮಾಡಿದರು.

ದಿವಾನನು ಚಂಗಯ್ಯನನ್ನು ಕರೆದುಕೊಂಡು, ದಿವಾನಕ್ಕೆ ಭೇಟೀ ಕೊಟ್ಟು, ಅವರಿವರನ್ನು ಮಾತಾಡಿಸುತ್ತ. ಆಮೇಲೆ ವರದನು ಮನೆಯಲ್ಲಿರುವ ಸಮಯ ನೋಡಿ ಅಲ್ಲಿಗೇ ಹೋದನು.



ದಿವಾನನು ವರದನ ಮನೆಯನ್ನು ಪ್ರವೇಶಿಸುವಾಗ, ಅಲ್ಲಿ ದಿವಾಣದ ಇನ್ನೊಬ್ಬ ಉದ್ಯೋಗಿಯಾದ ಶೇಖರನು ಕುಳಿತಿದ್ದನು. ವರದನು ಶೇಖರನಿಗೆ ಏನೋ ಹಣ ಕೊಡುತ್ತಾ ಇರುವಾಗಲೇ ದಿವಾನನು ಒಳಗೆ ಬರುತ್ತ ನೋಡಿಬಿಟ್ಟನು.

ಅದನ್ನು ನೋಡಿ ದಿವಾನನು ಕಿರುನಗುವಿನೊಂದಿಗೆ. "ಏನೋಯ್ ವರದಾ. ನೀನು ಸಂಬಳದ ಹಣದ ಮೇಲೆ, ಅಷ್ಟೋ ಇಷ್ಟೋ ಲಂಚದ ಹಣ ಕೂಡಾ ಸಂಪಾದಿಸಿಕೊಂಡು. ಕಷ್ಟ ತೊಳಲಾಟಗಳಿಲ್ಲದೆ ಕಾಲ ಕಳೆಯುವಿ ಎಂದು ಅನೇಕರು ಅಂದುಕೊಳ್ಳುತ್ತಾರೆ. ಈಗ ನೋಡಿದರೆ ನೀನೇ ನಿನ್ನ ಸಹೋದ್ಯೋಗಿಗೆ ಲಂಚ ಕೊಡುವ ಹಾಗೆ ಕಾಣುತ್ತದಲ್ಲಾ!" ಎಂದರು.

ಆ ಮಾತು ಶೇಖರನಿಗೆ ಜುಪ್ಪನಿಸಿತು. ವರದನು ಸ್ವಲ್ಪವೂ ಗಾಬರಿಯಾಗದೆ, ದಿವಾನನು ಕುಳಿತುಕೊಳ್ಳಲು ಬದಿಯಲ್ಲಿದ್ದ ಒರಗು ಕುರ್ಚಿಯನ್ನು ಮುಂದೆ ಸರಿಸಿಟ್ಟು, "ಅಯ್ಯಾ. ಈ ಶೇಖರನು ನಮ್ಮ ದಿವಾಣದಲ್ಲಿರುವ ಉದ್ಯೋಗಿ ತಾನೆ? ಏನೋ ಹಣದ ಕಷ್ಟದಲ್ಲಿರುವುದಾಗಿ ಕೇಳಿದ. ಕೈಗಡವಾಗಿ ಸ್ವಲ್ಪ ಹಣಕೊಟ್ಟೆ, ಸಂಬಳ ಬಂದ ಕೂಡಲೇ ಕೊಡುತ್ತಾನೆ." ಎಂದನು.

ದಿವಾನನು ಆಶ್ಚರ್ಯದಿಂದ ಶೇಖರನನ್ನು ನೋಡಿ, "ದಿವಾಣದಲ್ಲಿ ನಿಮ್ಮಿಬ್ಬರಿಗೂ ಒಂದೇ ರೀತಿಯ ಉದ್ಯೋಗ, ಒಂದೇ ರೀತಿಯ ಸಂಬಳ ಅಲ್ಲವೇನು? ಹಾಗಿರುವಾಗ ವರದನಿಗೆ ಬಾರದ ಕಷ್ಟ ನಿನಗೆ ಹೇಗೆ ಬರುತ್ತದೆ? ನಿನ್ನ ಸಂಸಾರ ವರದನಿಗಿಂತ ದೊಡ್ಡದೇನೂ ಅಲ್ಲವಷ್ಟೆ?" ಎಂದು ಹೇಳಿ. ವರದನನ್ನು ನೋಡಿ, "ಏನಯ್ಯಾ, ವರದಾ, ನೀನು ಯಾವ ಕಷ್ಟಗಳಿಗೂ ಒಳಗಾಗದೆ ಬದುಕು ಸಾಗಿಸುವಿ ಅಂತ ಕಾಣುತ್ತದೆ. ಅದು ಹೇಗೆ? ಏನು ಅದರ ಗುಟ್ಟು?" ಎಂದು ಕೇಳಿದನು.

"ಇದರಲ್ಲಿ ಅಂಥಾ ದೊಡ್ಡ ಗುಟ್ಟೇನೂ ಇಲ್ಲ ಸ್ವಾಮೀ. ನಿಮ್ಮ ಮುಂದೆ ಹೇಳಬಹುದಾದರೂ, ಶೇಖರನಿಗ ನಾನೇನೋ ನೀತಿ ಹೇಳುವಹಾಗೆ ಕಾಣಬಹುದು. ನನ್ನ ರೀತಿಯನ್ನು ಹೇಳುವುದರಲ್ಲಿ ತಪ್ಪೇನಿಲ್ಲ. ನನಗೆ ತಿಂಗಳ ಆಖೈರಿಗೆ ಸಂಬಳ ಬಂದ ಕೂಡಲೇ ಅದರಲ್ಲಿ ಮನೆಯ ಖರ್ಚಿಗೆ ಇಷ್ಟು ಅಂತ ತೆಗೆದಿಡುತ್ತೇನೆ. ಮನೆಯಲ್ಲಿ ಯಾರಿಗಾದರೂ ಆಕಸ್ಮಿಕ ರೋಗ ರುಜಿನ ಯಾವುದೂ ಬಾರದಿದ್ದರೆ, ಆ ಮನೆ ಖರ್ಚಿನ ಹಣದಲ್ಲಿ ಸ್ವಲ್ಪ ಉಳಿದುಕೊಳ್ಳುತ್ತದೆ. ಅಂತಹ ಆಕಸ್ಮಿಕಗಳು ಅಪರೂಪವೇ

ಅನ್ನಿ. ಉಳಿದ ಹಣದಿಂದ, ಸ್ವಲ್ಪ ಹಬ್ಬಗಳಿಗೂ, ಹೊಸ ಬಟ್ಟೆ ಮೊದಲಾದುವುಗಳಿಗೂ ಇರಲೀ ಅಂತ ಬೇರೆ ಇಟ್ಟುಬಿಡುತ್ತೇನೆ. ಈ ವಿಧವಾಗಿ ಸಂಬಳದ ಹಣದಲ್ಲಿ ಶೇಕಡಾ ಎಂಬತ್ತರಷ್ಟು ಹೋಗಲಾಗಿ, ಉಳಿದ ಇಪ್ಪತ್ತು ಭವಿಷ್ಯತ್ತಿನಲ್ಲಿ ಕೆಲಸದಿಂದ ವಿರಾಮ ಹೊಂದಿದ ಮೇಲೆ, ಬದುಕಲು ಉಳಿಸಿಕೊಳ್ಳುತ್ತೇನೆ. ಆ ಹಣದಿಂದಲೇ ಯಾರಾದರೂ ಸ್ನೇಹಿತರಿಗೆ ಕೈಬದಲು ಕೊಟ್ಟು ಸಹಾಯಮಾಡುವುದು. ಅಷ್ಟೇ " ಎಂದನು ವರದ.

" ಚೆನ್ನಾಗಿದೆ. ಜೀವನವನ್ನು ಒಂದು ಕ್ರಮಶಿಕ್ಷಣದಿಂದ ನಡೆಸುವುದೆಂದರೆ ಹೀಗೆಯೇ ನಿಜ. ನಿನ್ನನ್ನು ನೋಡಿಯಾದರೂ ಶೇಖರನಂಥವರು ಏಕೆ ಕಲಿತುಕೊಳ್ಳಬಾರದು ? ಅಂತಹ ಒಳ್ಳೆಯ ಬುದ್ಧಿಯನ್ನು ಮೂಲೆಗೆ ಒತ್ತಿ, ನಿನ್ನ ಮೇಲೆ ಇಲ್ಲದ ಹೊಲ್ಲದ ಪುಕಾರು ಹೇಳುವುದೆಂದರೇನಿದು ! " ಎಂದನು ದಿವಾನನು ಕೋಪದಿಂದ. ಶೇಖರನ ಮುಖವು ಚಿಕ್ಕದಾಯಿತು.

ಆಮೇಲೆ ದಿವಾನನು ಅಲ್ಲಿಂದ ಜಮೀನುದಾರರ ಬಳಿಗೆ ಬಂದು, " ಪ್ರಭುಗಳೇ, ನಾನು ವಿಚಾರಿಸಿದುದರಲ್ಲಿ ವರದನು ಉಳಿದ ಉದ್ಯೋಗಸ್ಥರಿಗೆಲ್ಲ ಆದರ್ಶದವನೆಂದೇ ಹೇಳಬೇಕು. ಇಷ್ಟು ವರ್ಷದಿಂದ ಅವನು ತನ್ನ ಆದಾಯಕ್ಕೆ ಅನುಗುಣವಾಗಿ, ಕ್ರಮಪದ್ಧತಿಯಲ್ಲಿ ಖರ್ಚು ಮಾಡಿಕೊಂಡು, ಇದ್ದುದರಲ್ಲಿ ಸುಖವಾಗಿ ಇರುತ್ತಾನೆ. ಉಳಿದ ಉದ್ಯೋಗಸ್ಥರ ಬದುಕಿನ ರೀತಿ ಅವನಿಗಿಂತ ಭಿನ್ನವಾದುದೇ. ತಮ್ಮ ಆರ್ಥಿಕ ತೊಂದರೆಗಳಿಗೆ ಮೂಲಕಾರಣ ತಿಳಿಯದವರೆಲ್ಲಾ, ವರದನೂ ತಮ್ಮ ಹಾಗೆ ಲೆಕ್ಕಪಕ್ಕ ತಿಳಿಯದಂತಹ ಖರ್ಚುಗಾರನೆಂದುಕೊಂಡು ಇಲ್ಲದ ಪುಕಾರು ಎಬ್ಬಿಸಿದ್ದಾರೆ, ಅಷ್ಟೇ " ಎಂದು ಹೇಳಿದನು.

ಅದನ್ನು ಕೇಳಿ ಜಮೀನುದಾರರು ಕೋಪದಿಂದ, " ಇಷ್ಟೇನಾ ವರದನ ಮೇಲಿನ ತಪ್ಪು ! ಅವನ ಮೇಲೆ ವೃಥಾಪವಾದ ಹೇರಿದವರನ್ನೆಲ್ಲ ವಿಚಾರಿಸಿ ದಂಡಿಸಿಬಿಡಿರಿ " ಎಂದರು.

ದಿವಾನನು ಮುಗುಳುನಕ್ಕು, " ಪ್ರಭೂ, ವರದನಂಥವರು ಬಹಳ ಅಪೂರ್ವವಾಗಿಯೇ ಇರುತ್ತಾರೆ. ಆದುದರಿಂದಲೇ ಅಂಥವರು ತಮ್ಮ ಹಾಗೆಯೇ ಇರುವವರ ಕುತೂಹಲಕ್ಕೆ ಪಾತ್ರರಾಗಿ, ಕಡೆಗೆ ಅರ್ಥವಿಲ್ಲದ ಶಂಕೆಗಳಿಗೂ ಕಾರಣರಾಗುತ್ತಾರೆ. ಇದು ಸಹಜವೇ. ಆದುದರಿಂದ ನಾವು ವರದನಿಗೆ ಇನ್ನಿಷ್ಟು ಉನ್ನತಪದವಿ ಕೊಟ್ಟುಬಿಟ್ಟರೆ, ಅವನ ಮೇಲೆ ಪುಕಾರು ಹುಟ್ಟಿಸಿದವರಿಗೆ, ಬೇರೆ ಶಿಕ್ಷೆ ಕೊಡುವ ಅಗತ್ಯವೇ ಇಲ್ಲ " ಎಂದನು.

ಆಮೇಲೆ ದಿವಾನನ ಸಲಹೆಯಂತೆ ಜಮೀನುದಾರರು ವರದನನ್ನು ದಿವಾಣದ ಕೋಶಾಧಿಕಾರಿಗೆ ಸಹಾಯಕನಾಗಿ ನಿಯಮಿಸಿದರು.



# ಓದುಬರಿಸುವ ಮಂತ್ರ

**ನಾ**ರಾಯಣ ದೀಕ್ಷಿತನೆಂಬ ಹುಡುಗನನ್ನು ವಿದ್ಯಾಭ್ಯಾಸಕ್ಕಾಗಿ ಅವನ ತಂದೆ ಗುರುಕುಲದಲ್ಲಿ ಸೇರಿಸಿದನು. ಆ ಹುಡುಗ ಜಡ ಭರತನಂತೆ ಸೋಮಾರಿ. ಬೆಳಿಗ್ಗೆ ಬೇಗನೇ ಎದ್ದು ಪಾಠಗಳನ್ನು ಉರುಹಾಕ ಬೇಕೆಂದರೆ ಅವನಿಗೆ ಬಹಳ ಕಷ್ಟವಾಗಿತ್ತು. ಹೀಗೆ ಹನ್ನೆರಡು ವರ್ಷ ಓದಿದರೆ ಹೊರತು ವಿದ್ಯೆ ಬಾರದಂತೆ! ಹೇಗಪ್ಪಾ ಅನಿಸಿತು ಅವನಿಗೆ ತಲೆಯ ಮೇಲೆ ದೊಡ್ಡ ಗುಡ್ಡವನ್ನೇ ಹೊತ್ತ ಹಾಗಾಯಿತು.

ಒಂದುಸಾರಿ ಗುರುಕುಲಕ್ಕೆ ಸ್ವಾಮೀಜೀಯೊಬ್ಬರು ಬಂದರು.

ಅವರು ದೊಡ್ಡ ಪಂಡಿತರೆಂದೂ, ಮಂತ್ರ ಶಾಸ್ತ್ರ ಕರೆಕಂಡವರೆಂದೂ ಉಪಾಧ್ಯಾಯರು ಹೇಳುವ ಮಾತು ದೀಕ್ಷಿತ ಹುಡುಗನ ಕಿವಿಗೆ ಬಿತ್ತು.

ಒಂದು ದಿನ ಸ್ವಾಮೀಜೀ ಸಂಜೆಯ ಹೊತ್ತಿನಲ್ಲಿ ಮರದ ಕೆಳಗೆ ಕುಳಿತು ಯಾವುದೋ ಗ್ರಂಥವನ್ನು ಓದಿ ಕೊಂಡಿದ್ದರು. ದೀಕ್ಷಿತನು ಅವರ ಬಳಿಗೆ ಹೋಗಿ, "ಸ್ವಾಮೀಜೀ! ಸುಲಭವಾಗಿ ಓದುಬರುವಂತಹ ಮಂತ್ರವೇನಾದರೂ ಇದೆಯೆ?" ಎಂದು ಆಸೆಯಿಂದ ಕೇಳಿದನು.

ಸ್ವಾಮೀಜೀ ಆತನ ಮುಖವನ್ನು ಟಕಮಕನೆ ನೋಡಿ, ಕಣ್ಣು ಮುಚ್ಚಿ, "ಇದೆಯಪ್ಪಾ, ಇದೆ. ಸರಸ್ವತೀ ದೇವಿಯ ಅನುಗ್ರಹ ಪಡೆಯಲು ಒಂದು ಮಂತ್ರವಿದೆ" ಎಂದರು.

"ಹಾಗಾದರೆ ಆ ಮಂತ್ರ ದಯಮಾಡಿ ನನಗೆ ಉಪದೇಶಿಸಬೇಕು" ಎಂದು ದೀಕ್ಷಿತನು ಸಾಷ್ಟಾಂಗ ನಮಸ್ಕಾರಮಾಡಿ ಕೈಮುಗಿದನು.

ಸ್ವಾಮೀಜೀ ಮುಗುಳುನಗುತ್ತ, "ಅದಕ್ಕೇನು! ಉಪದೇಶಿಸುತ್ತೇನೆ. ಆ ಮಂತ್ರವನ್ನು ಪ್ರತಿದಿನ ಬೆಳಂಜಾವ ನಾಲ್ಕು ಗಂಟೆಗೇ ಎದ್ದು, ತಣ್ಣೀರಿನಲ್ಲಿ ಸ್ನಾನಮಾಡಿ, ನೂರೆಂಟು ಸಾರಿ ಜಪಿಸಬೇಕು. ಹಾಗೆ ಹದಿನಾಲ್ಕು ವರ್ಷ ಮಾಡಿದರೆ ಸರಸ್ವತೀ ದೇವಿ ಎಲ್ಲಾ ವಿದ್ಯೆಗಳನ್ನೂ ಅನುಗ್ರಹಿಸುತ್ತಾಳೆ. ನಾಳೆ ಬೆಳಗ್ಗೆ ಸ್ನಾನ ಮಾಡಿ ಬಾ. ಉಪದೇಶಿಸುತ್ತೇನೆ" ಎಂದರು.

ಅದನ್ನುಕೇಳಿ ದೀಕ್ಷಿತನು ಹೆದರಿ, ಸ್ವಾಮೀಜಿಯ ಪಾದ ಮುಟ್ಟಿ, "ಆ ಮಂತ್ರ ಬೇಡ ಸ್ವಾಮೀಜೀ. ಸಾಧಾರಣ ಪದ್ಧತಿಯಲ್ಲೇ ವಿದ್ಯೆ ಕಲಿಯುತ್ತೇನೆ" ಎಂದನು.





# ಬರಗಾಲ

ಹಿಂದೆ ಮಹೇಂದ್ರ ಗಿರಿರಾಜ್ಯವನ್ನು ವಿಶಾಲಾಕ್ಷ ನೆಂಬ ರಾಜನು ಆಳಿಕೊಂಡಿದ್ದನು. ಆ ರಾಜನು ಅನುಮಾನದ ಹುತ್ತವಾಗಿದ್ದನು. ಯಾರನ್ನೂ ಸುಲಭ ದಲ್ಲಿ ನಂಬುತ್ತಿರಲಿಲ್ಲ. ಮಂಡಲಾಧಿಕಾರಿಗಳಾರಾದರೂ ಪರಿಪಾಲನೆಯ ಅಗತ್ಯಗಳಿಗೆ ಇಂತಿಷ್ಟು ಧನವು ಬೇಕೆಂದು ಬಿನ್ನವತ್ತಳೆ ಕಳುಹಿಸಿದರೆ, ಅದರಲ್ಲಿ ಅವರ ಸ್ವಾರ್ಥವೇನೋ ಇರಬೇಕೆಂದು ರಾಜನಿಗೆ ಅನುಮಾನವಾಗುತ್ತಿತ್ತು. ರಾಜನು ಕೇಳುವ ಹಲವಾರು ಪ್ರಶ್ನೆಗಳಿಗೆ ಉತ್ತರ ಕೊಡಲು ಬಹಳ ಕಷ್ಟಪಡಬೇಕಾಗುತ್ತಿತ್ತು.

ಒಂದುಸಾರಿ ಆ ರಾಜ್ಯದ ಉಜ್ವಲಮಂಡಲದಲ್ಲಿ ಎರಡು ವರ್ಷ ಬಿಡದೆ ಮಳೆಬಾರದೆ ಭಯಂಕರವಾದ ಬರಗಾಲದ ಪರಿಸ್ಥಿತಿ ಉಂಟಾಯಿತು. ರಾಜನಿಂದ ಹೆಚ್ಚಿನ ಸಹಾಯ ಪಡೆಯದೆ ಉಪಾಯವಿರಲಿಲ್ಲ.

ಉಜ್ವಲ ಮಂಡಲಾಧಿಕಾರಿಯಾದ ಗರುಡ ವರ್ಮನು ವಿಶಾಲಾಕ್ಷ ರಾಜನಿಗೆ ಒಂದು ನಿವೇದಿಕೆ ಯನ್ನು ಕಳುಹಿಸಿದನು. ಅದರಲ್ಲಿ ಉಜ್ವಲ ಮಂಡಲದ ಕ್ಷಾಮ ಪರಿಸ್ಥಿತಿಯನ್ನು ವಿವರಿಸಿ, ಸಹಾಯ ವಾಗಿ ಐದು ಲಕ್ಷ ವರಹಗಳನ್ನು ಕಳುಹಿಸಬೇಕೆಂದು ಕೇಳಿಕೊಂಡಿದ್ದನು. ಇದೂ ಸಾಕಾಗದೆ ಹೋದರೆ ಮತ್ತೆ ಕೇಳಬೇಕಾಗುವುದೆಂದೂ ಸೂಚಿಸಿದ್ದನು.

ವಿಶಾಲಾಕ್ಷ ರಾಜನು ಆ ನಿವೇದಿಕೆಯನ್ನು ಓದಿ, ಮಂತ್ರಿ ಚಂದ್ರವರ್ಮನೊಂದಿಗೆ, "ಇದರಲ್ಲಿ ಗರುಡ ವರ್ಮನ ಪಾಲು ಎಷ್ಟಿದೆಯೆಂದು ನಿಮ್ಮ ಊಹೆ?" ಎಂದು ವ್ಯಂಗ್ಯವಾಗಿ ಕೇಳಿದನು.

ರಾಜನ ಈ ಪ್ರಶ್ನೆಯನ್ನು ಕೇಳಿ ಚಂದ್ರವರ್ಮನಿಗೆ ಬಹಳ ನೋವಾಯಿತು. ಉಜ್ವಲ ಪ್ರಾಂತದ ಭಯಂಕರವಾದ ಬರಗಾಲದ ಗೋಳಾಟಗಳನ್ನು ಈ ಮೊದಲೇ ಅವನು ಕೇಳಿದ್ದನು. ಅಲ್ಲಿರುವ ಅವನ ಬಂಧುಗಳು ಕೆಲವರು ಕ್ಷಾಮದ ಬೇಗೆಗೆ ಗುರಿಯಾಗಿ ಸಹಾಯಕ್ಕಾಗಿ ಅವನನ್ನು ಪ್ರಾರ್ಥಿಸಿಕೊಂಡಿದ್ದರು.

ಚಂದ್ರವರ್ಮನು ತನಗೆ ತಿಳಿದ ವಿಷಯವನ್ನು ರಾಜನೊಂದಿಗೆ ಹೇಳಬೇಕೆಂದಿದ್ದನು. ಹಾಗೆ ಹೇಳಿದರೆ ರಾಜನು ಗರುಡವರ್ಮನನ್ನು ಕುರಿತು ಹೇಳಿ ದಂತೆಯೇ, ತನ್ನ ಮೇಲೆಯೂ ಏನಾದರೂ ವ್ಯಂಗ್ಯ ವಾಗಿ ಹೇಳಬಹುದೆಂದುಕೊಂಡು, "ಮಹಾರಾಜಾ, ಗರುಡವರ್ಮನ ನಿವೇದಿಕೆಯನ್ನು ಕುರಿತು ವಿವರ ವಾಗಿ ನನಗೇನೂ ತಿಳಿಯದು. ಆದರೆ ಅವನ

ರಾಂಬಾಬು

ಮಂಡಲದಲ್ಲಿ ಮಳೆಬಾರದೆ ಬರ ಬಂದಿದೆಯೆಂದು ರಾಜಧಾನಿಯಲ್ಲಿ ಕೆಲವರು ಮಾತಾಡಿಕೊಳ್ಳುವುದನ್ನು ಕೇಳಿದ್ದೇನೆ. ಪ್ರತ್ಯಕ್ಷ ನೋಡದೆ ಏನು ಹೇಳಲೂ ಸಾಧ್ಯವಾಗದು ಪ್ರಭೂ" ಎಂದನು.

"ಹಾಗಾದರೆ ನೀವು ಕೂಡಲೇ ಅಲ್ಲಿಗೆ ಹೋಗಿ, ಪರಿಸ್ಥಿತಿಯನ್ನು ನೋಡಿ, ಸರಿಯಾದ ನಿವೇದಿಕೆಯೊಂದನ್ನು ತಯಾರಿಸಿ ಕೊಡಿರಿ. ಹಾಗೆ ಮಾಡಿದರೇನೇ ಗರುಡವರ್ಮನಿಗೂ ಸ್ವಲ್ಪ ಬಿಸಿ ಹುಟ್ಟುತ್ತದೆ." ಎಂದನು ವಿಶಾಲಾಕ್ಷ ಮಹಾರಾಜ.



ಮಂತ್ರಿ ಚಂದ್ರವರ್ಮನು ಮರುದಿನವೇ ಉಜ್ವಲ ಮಂಡಲಕ್ಕೆ ಪ್ರಯಾಣ ಮಾಡಿದನು. ಅಲ್ಲಿಗೆ ಹೋಗಿ ಮಂಡಲಾಧಿಕಾರಿಯಾದ ಗರುಡವರ್ಮನನ್ನು ನೋಡಿ, ಅವನ ಜತೆಯಲ್ಲಿ ಕ್ಷಾಮಪೀಡಿತ ಪ್ರದೇಶಗಳನ್ನು ನೋಡುತ್ತಿರಲು. ಚಂದ್ರವರ್ಮನ ಕಣ್ಣುಗಳಲ್ಲಿ ನೀರು ತುಂಬಿತು. ಹಡಿಲು ಬಿದ್ದು ಭಣಭಣಿಸುವ ಹೊಲ ಗದ್ದೆಗಳು. ಆ ಹೊಲಗಳಲ್ಲಿ ಸತ್ತು ಬಿದ್ದ ಎಲುವು ಗೂಡಿನಂತಹ ಪಶುಗಳು, ಅವುಗಳನ್ನು ಕುಕ್ಕಿ ತಿನ್ನುವ ರಣ ಹದ್ದುಗಳು, ಗತಿಕೇಡಿ ನಾಯಿಗಳು, ದೀನಾವಸ್ಥೆಯಲ್ಲಿ ಹೊಟ್ಟೆಯನ್ನು ಒತ್ತಿಕೊಂಡಿರುವ ಪ್ರಜೆಗಳು. ಹೀಗೆ ಘೋರವಾದ ದೀನ ದೃಶ್ಯ!

ಇದನ್ನೆಲ್ಲ ನೋಡಿ ಚಂದ್ರವರ್ಮನು ಎಷ್ಟರ ಮಟ್ಟಿಗೆ ಸಹಾಯಬೇಕೆಂಬುದನ್ನು ಗರುಡವರ್ಮನೊಂದಿಗೆ ಆಲೋಚಿಸಿ, "ಮಹಾರಾಜರೊಂದಿಗೆ ನೀವು ಕೇಳಿದ ಐದು ಲಕ್ಷದ ಸಹಾಯ ಏನೇನೂ ಸಾಲದು. ಕಡೇ ಪಕ್ಷ ಹತ್ತು ಲಕ್ಷ ವರಹ ಖರ್ಚು ಮಾಡಿದ ಹೊರತು ಈ ಕ್ಷಾಮದ ಕಾಟವನ್ನು ತಡೆಯುಲು ಸಾಧ್ಯವಿಲ್ಲ" ಎಂದನು.

ಅವನು ತನ್ನ ಅಂದಾಜು ಪ್ರಕಾರ ಹತ್ತು ಲಕ್ಷ ಸಹಾಯ ಬೇಕಾಗುತ್ತದೆಂದು, ಒಂದು ನಿವೇದಿಕೆಯನ್ನು ತಯಾರು ಮಾಡಿ, ಹಿಂದಿರುಗಿ ವಿಶಾಲಾಕ್ಷ ರಾಜನ ಬಳಿಗೆ ಬಂದು ಅದನ್ನು ಕೊಟ್ಟನು.

ರಾಜನು ಆ ನಿವೇದಿಕೆಯಲ್ಲಿರುವ ಬರಗಾಲದ ಘೋರವರ್ಣನೆಯನ್ನು ನೋಡಿ ಸ್ವಲ್ಪವೂ ಚಲಿಸದೆ, "ಅಂತೂ ಆ ಮಂಡಲಾಧಿಕಾರಿ ತುಂಬಾ ಅನುಭವಶಾಲಿಗಳಾದ ನಿಮ್ಮನ್ನು ಕೂಡಾ ತನ್ನ ಪಕ್ಷಕ್ಕೆ ಸೇರಿಸಿಕೊಂಡು ಬಿಟ್ಟ ಹಾಗಿದೆ!" ಎಂದನು ಮುಗುಳು ನಗುತ್ತ. ಮಂತ್ರಿ ಉಕ್ಕಿಬರುವ ಕೋಪವನ್ನು ನುಂಗಿಕೊಳ್ಳುತ್ತ, "ಮಹಾರಾಜರೇ, ಅಲ್ಲಿಯ ಕ್ಷಾಮ ಪರಿಸ್ಥಿತಿಯನ್ನು ನಾನು ಸ್ವಂತ ಕಣ್ಣುಗಳಿಂದ ನೋಡಿದವನು. ಮಂಡಲಾಧಿಕಾರಿ ಕೇಳಿದ ಐದು ಲಕ್ಷ ವರಹ ಯಾವ ಮೂಲೆಗೂ ಸಾಕಾಗದು, ತಾವೇ ಒಂದು ಸಾರಿ ಆ ಪ್ರಾಂತವನ್ನು ಏಕೆ ದರ್ಶನ ಮಾಡಬಾರದು? ಆಗ ಹತ್ತು ಲಕ್ಷ ಕೂಡಾ ಸಾಕಾಗುವುದು ಸಂದೇಹವೆಂದು ನಿಮಗೆ ಗೊತ್ತಾದೀತು." ಎಂದನು.

ರಾಜನು ಒಂದೆರಡು ಕ್ಷಣ ಮೌನವಾಗಿದ್ದು, "ಸರಿ, ಅದೂ ನಿಜ. ಹಾಗೆಯೇ ಮಾಡುತ್ತೇನೆ, ನೀವೂ ಜತೆಯಲ್ಲಿರಬೇಕು" ಎಂದನು.

ಮರುದಿನ ವಿಶಾಲಾಕ್ಷ ರಾಜನೂ, ಮಂತ್ರಿಯೂ ಉಜ್ವಲ ಮಂಡಲಕ್ಕೆ ಹೊರಟರು. ನಗರವನ್ನು ದಾಟಿ ಸ್ವಲ್ಪ ದೂರ ಹೋಗುವಾಗ ದಾರಿಯ ಎರಡು ಬದಿಗಳಲ್ಲಿ ತುಂಬು ಬೆಳೆಯ ಹೊಲಗಳು. ಅವುಗಳ ಪಕ್ಕದಲ್ಲಿ ಬೆಕ್ಕುನಾಯಿ ಹೆಗ್ಗಣ ಮೊದಲಾದ ಪ್ರಾಣಿಗಳ ಶವಗಳೂ ಕಾಣಿಸಿದುವು.

ರಾಜನು ಮಂತ್ರಿಗೆ ಆ ಶವಗಳನ್ನು ತೋರಿಸುತ್ತ, "ನಮ್ಮ ರೈತರಿಗೆ ಸ್ವಲ್ಪವೂ ಪಾರಿಶುದ್ಧ್ಯವಿಲ್ಲದಂತೆ ಕಾಣುತ್ತದೆ. ಬಹಳ ಅಜ್ಞಾನಿಗಳಂತಿದೆ. ಸತ್ತ ಪ್ರಾಣಿಗಳನ್ನು ಹೀಗೆ ಎಸೆದು ದುರ್ನಾತಕ್ಕೆ ಎಡೆ ಮಾಡುವುದುಂಟೆ ? ಸ್ವಲ್ಪ ಹುಗಿದರೇನಂತೆ ?" ಎಂದನು.

"ಮಹಾರಾಜಾ, ಸಾಧಾರಣವಾಗಿ ಹೀಗೆ ಸತ್ತ ಜಂತುಗಳನ್ನು ಹುಗಿಯುವುದಿಲ್ಲ, ದೂರ ಬಿಸಾಡುತ್ತಾರೆ. ಅವುಗಳನ್ನು ಕಾಗೆ ಹದ್ದು ಮೊದಲಾದ ಪ್ರಾಣಿಗಳು ಕುಕ್ಕಿ ತಿಂದು ಹಾಕುತ್ತವೆಂದು ಎಲ್ಲರಿಗೂ ಗೊತ್ತು" ಎಂದನು ಮಂತ್ರಿ.

"ಅದು ನಿಜವೇ ಆದರೂ, ಈ ಪ್ರಾಂತದಲ್ಲೆಲ್ಲಿಯೂ ಒಂದೇ ಒಂದು ರಣ ಹದ್ದೋ ಗಿಡುಗವೋ, ಕಾಗೆಯೋ, ನಾಯಿಯೋ, ಕಾಣುವುದಿಲ್ಲವೇಕೆ? ಅದೇ ಆಶ್ಚರ್ಯ!" ಎಂದನು ರಾಜ. "ಇದರಲ್ಲಿ ಆಶ್ಚರ್ಯಕ್ಕೇನಿದೆ ಪ್ರಭೂ. ನಮ್ಮ ರಾಜ್ಯದ ಕಾಗೆ ನಾಯಿಗಳೂ. ಸಮೀಪದ ಗುಡ್ಡಗಳಲ್ಲಿರುವ ಹದ್ದು, ರಣಹದ್ದುಗಳೂ ಔತಣಕ್ಕೆ ಹೋದ ಹಾಗೆ ಉಜ್ವಲ ಮಂಡಲಕ್ಕೆ ಹೋಗಿದ್ದಾವು" ಎಂದನು ಮಂತ್ರಿ.

ಈ ಉತ್ತರದಿಂದ ವಿಶಾಲಾಕ್ಷ ರಾಜನಿಗೆ ವಾಸ್ತವ ಸಂಗತಿ ಏನೆಂದು ಅರ್ಥವಾಯಿತು, ಅವನು ನಡುಗುವ ಸ್ವರದಿಂದ, ರಥವನ್ನು ಹಿಂದಕ್ಕೆ ತಿರುಗಿಸುವಂತೆ ಸಾರಥಿಗೆ ಆಜ್ಞೆ ಮಾಡಿದನು.

"ಇದೇನು ಮಹಾರಾಜಾ ! ನಾವು ಉಜ್ವಲ ಮಂಡಲಕ್ಕೆ ಹೋಗುತ್ತಿದ್ದೇವಲ್ಲ ? ಏನಾದರೂ ಮರೆತು ಹೋಗಿದೆಯೆ ? " ಎಂದನು.

"ಅದೇನಿಲ್ಲ. ಇನ್ನು ಉಜ್ವಲ ಮಂಡಲಕ್ಕೆ ಹೋಗಬೇಕಾದ ಅಗತ್ಯವೇ ಇಲ್ಲ. ಅಲ್ಲಿಯ ಕ್ಷಾಮ ಪರಿಸ್ಥಿತಿ ಹೇಗಿರುವುದೆಂದು ಇಲ್ಲಿಯೇ ತಿಳಿದುಕೊಳ್ಳುವಂತಾಯಿತು." ಎಂದನು ರಾಜ.

ವಿಶಾಲಾಕ್ಷ ರಾಜನು ಅರಮನೆಗೆ ಹಿಂದಿರುಗಿ ಕೂಡಲೇ ಉಜ್ವಲ ಮಂಡಲಕ್ಕೆ ತತ್ಕ್ಷಣ ಸಹಾಯವಾಗಿ, ಇಪ್ಪತ್ತು ಲಕ್ಷ ವರಹಗಳನ್ನು ಮಂಜೂರು ಮಾಡಿದನು.

ಅನೇಕ ಬಂಡಿಗಳಲ್ಲಿ ಧಾನ್ಯಗಳ ಮೂಟೆಗಳನ್ನು ಅಲ್ಲಿಗೆ ಕಳುಹಿಸಿದನು. ಅಲ್ಲದೆ ತೀವ್ರ ಪರಿಹಾರ ಕಾರ್ಯಗಳನ್ನು ರೂಪಿಸಿ, ಅವುಗಳನ್ನು ಕಾರ್ಯಗತಗೊಳಿಸಲು ಮಂತ್ರಿಯನ್ನೇ ಆ ಪ್ರಾಂತಕ್ಕೆ ಕಳುಹಿಸಿಕೊಟ್ಟನು.



# ಮರ್ಯಾದೆಯ ಮಾತು

ಒಂದು ಊರಿನಲ್ಲಿ ಪ್ರಶಾಂತನೆಂಬವನಿಗೆ, ತಾನು ಚೆನ್ನಾಗಿ ಹಾಡುವೆನೋ ಇಲ್ಲವೋ ಎಂದು ಅನುಮಾನ. ಒಂದು ದಿನ ಅವನು ತನ್ನ ಪಾಡಿಗೆ ಹೋಗುತ್ತಿದ್ದ ದಾರಿ ಹೋಕನೊಬ್ಬನನ್ನು ಕರೆದು, ಅವನ ಮುಂದೆ ಒಂದು ಹಾಡನ್ನು ಹಾಡಿ, "ನನ್ನ ಹಾಡು ಹೇಗಿದೆ ?" ಎಂದು ಕೇಳಿದನು.

"ತಮ್ಮ ಮೂಗು ಬಹಳ ಚೆನ್ನಾಗಿದೆ" ಎಂದನು ದಾರಿ ಹೋಕ.

ಹಾಡನ್ನು ಕುರಿತು ಕೇಳಿದರೆ ಮೂಗನ್ನು ಕುರಿತು ಹೇಳುವೆ ಏಕೆ ?" ಎಂದು ಪ್ರಶಾಂತನು ಆಶ್ಚರ್ಯದಿಂದ ಅವನನ್ನು ಕೇಳಿದನು.

"ಅದು ನಮ್ಮ ಮನೆಯ ಮರ್ಯಾದೆ" ಎಂದ ದಾರೀ ಹೋಕ.

"ಇದೆಂಥ ಮರ್ಯಾದೆ ! ಹಾಡಿನ ಸಂಗತಿ ಕೇಳಿದರೆ ಮೂಗು ಚೆನ್ನಾಗಿದೆ ಎಂಬುದು ಮರ್ಯಾದೆಯೋ ?" ಎಂದು ಪ್ರಶಾಂತನು ಕೋಪದಿಂದ ಪ್ರಶ್ನಿಸಿದನು.

"ಒಬ್ಬರು ಏನನ್ನೋ ಕುರಿತು ನಮ್ಮ ಅಭಿಪ್ರಾಯ ಕೇಳಿದರೆನ್ನಿ. ಅದು ನಮಗೆ ಹಿಡಿಸದೆ ಹೋದರೆ ಹಾಗೆ ಹೇಳುವುದಕ್ಕೆ ಬದಲಾಗಿ, ನಮಗೆ ಹಿಡಿಸಿದ ಒಂದನ್ನು ಹೇಳುವುದು ಮರ್ಯಾದೆ. ಎಂದು ನನ್ನ ತಾತ ಅಪ್ಪನಿಗೂ, ಅಪ್ಪ ನನಗೂ ಹೇಳಿದ್ದಾರೆ. ಗೊತ್ತಾಯಿತಷ್ಟೆ ?" ಎಂದು ಹೇಳಿ ದಾರಿ ಹೋಕನು ಹೊರಟು ಹೋದನು.

ಪ್ರಶಾಂತನ ಮುಖ ಪೆಟ್ಟು ತಿಂದ ಹಾಗಾಯಿತು.





# ಜಲದಾನ

ವಿಂಧ್ಯಾದ್ರಿಯ ಸಮೀಪದ ಒಂದು ಊರಿನಲ್ಲಿ ಒಬ್ಬ ಒಕ್ಕಲಿಗನಿದ್ದನು. ಅವನಿಗೆ ಗಂಗೆ ಎಂಬ ಒಬ್ಬಳು ಹೆಣ್ಣು ಮಗಳಿದ್ದಳು. ಅವಳು ಓಡಾಡಲು ತೊಡಗಿದ ಚಿಕ್ಕ ಪ್ರಾಯದಿಂದಲೇ ಕುರಿಗಳನ್ನೂ, ಮೇಕೆಗಳನ್ನೂ ಮೇಯಲು ಒಯ್ಯುತ್ತ, ಅವುಗಳು ತಿರುಗಿದಲ್ಲೆಲ್ಲಾ ಅವುಗಳೊಂದಿಗೆ ತಿರುಗುತ್ತಿದ್ದಳು. ಅವುಗಳ ಮೇಲೆ ಅವಳಿಗೆ ಅಷ್ಟು ಪ್ರೀತಿ. ಪ್ರಾಣಿಗಳ ಮೇಲೆ ಮಾತ್ರವಲ್ಲ, ಮರಗಿಡ ಬಳ್ಳಿಗಳ ಮೇಲೂ ಅವಳಿಗೆ ಪ್ರೀತಿ.

ಒಂದು ದಿನ ಗಂಗೆಗೆ ವಿಚಿತ್ರವಾದೊಂದು ಗಿಡವು ಕಂಡಿತು. ಅದು ಪಶುಗಳು ತಿರುಗಾಡುವ ಮೇವಿನ ಜಾಗದಲ್ಲಿಯೇ ಇದ್ದಿತು, ಅಲ್ಲಿದ್ದರೆ ಆ ಗಿಡಕ್ಕೆ ಕ್ಷೇಮ ವಿಲ್ಲವೆಂದು ತಿಳಿದು, ಗಂಗೆ ಆ ಗಿಡವನ್ನು ಅದಕ್ಕೆ ನೋವಾಗದಂತೆ ಮೆಲ್ಲನೆ ಕಿತ್ತು, ಸ್ವಲ್ಪ ಎತ್ತರದಲ್ಲಿ, ಕಲ್ಲುಗಳು ತುಂಬಿದ ಸ್ಥಳದಲ್ಲಿ ಕಷ್ಟಪಟ್ಟು ಹೊಂಡ ತೆಗೆದು, ಕಟ್ಟೆ ಮಾಡಿ ನೆಟ್ಟಳು.

ಅಷ್ಟಕ್ಕೆ ಬಿಡದೆ ಅವಳು ದಿನಾ, ಅದನ್ನು ತನ್ನ ಮಗುವೆಂದೇ ತಿಳಿದ ಹಾಗೆ ಸ್ವಲ್ಪ ದೂರದಲ್ಲಿದ್ದ ಕೆರೆಯಿಂದ ನೀರು ತಂದು ಅದಕ್ಕೆ ಎರೆಯುತ್ತಲೂ ಬಂದಳು. ಮನೆಯಲ್ಲಿ ಎಷ್ಟು ಕೆಲಸವಿದ್ದರೂ, ಈ ಕೆಲಸ ವನ್ನು ಮಾತ್ರ ಅವಳು ಒಂದು ದಿನವೂ ಮರೆಯಲಿಲ್ಲ.

ಗಂಗೆಯ ಬೆಳವಣಿಗೆಗಿಂತಲೂ ವೇಗವಾಗಿ ಆ ಮರವು ಬೆಳೆದು, ಗಂಗೆ ಸ್ವಲ್ಪ ದೊಡ್ಡವಳಾಗುವಾಗ ಅದು ಮಹಾ ವೃಕ್ಷವಾಯಿತು. ದಿನಾ ನೀರು ಹಾಕುವ ಗಂಗೆಯಿಂದಾಗಿ ಜನರು ಅದನ್ನು ಗಂಗೆಯ ಮರವೆಂದೇ ಹೇಳುತ್ತಿದ್ದರು, ಅದರ ಕೆಳಗಿನ ತಣ್ಣೆಳಲು ವಿಶ್ರಾಂತಿಗೆ ಬಹು ಸುಖವಾಗಿತ್ತು. ಅನೇಕ ಪಕ್ಷಿಗಳು ಆ ಮರದಲ್ಲಿ ವಾಸಮಾಡಿಕೊಂಡಿದ್ದುವು. ಬಿಸಿಲು ಜೋರಾಗಿದ್ದಾಗ ಆ ಪ್ರಾಂತದಲ್ಲಿ ಮೇಯುವ ಪಶುಗಳೆಲ್ಲ ಆ ಮರದ ನೆರಳಿಗೆ ಬಂದು ಮಲಗುತ್ತಿದ್ದುವು. ಬಿಸಿಲು ಕಾಲದಲ್ಲಿ ಆ ಪ್ರಾಂತಕ್ಕೆ ಆ ಮರವೇ ಸುಖಧಾಮವಾಗಿತ್ತು.

ಆ ಮರಕ್ಕೆ ಸ್ವಲ್ಪ ದೂರದಲ್ಲಿದ್ದ ಕೆರೆಯ ನೀರೇ ಸುತ್ತುಮುತ್ತಿನ ಊರಿನವರಿಗೆ ನೀರನ್ನು ಒದಗಿಸುವಂತಹುದು. ಬೇಸಗೆಯಲ್ಲಿ ಕೂಡಾ ಆ ಕೆರೆಯಲ್ಲಿ ಅಷ್ಟೋ ಇಷ್ಟೋ ನೀರು ಇದ್ದೇ ಇರುತ್ತಿತ್ತು, ಅದೂ ಸಾಲದಿದ್ದರೆ ಆ ಕೆರೆಯಲ್ಲಿ ಹೊಂಡಗಳನ್ನು ಮಾಡಿದರೆ ನೀರು ಬರುತ್ತಿತ್ತು. ಊರವರು ಆ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ

ನೀರನ್ನು ಬೇಸಗೆಯಲ್ಲಿ ಪ್ರಾಣದ ಹಾಗೆ ಕಾಪಾಡುತ್ತಿದ್ದರು. ಒಂದು ವೇಳೆ ಆ ಕೆರೆ ಒಣಗಿ ಹೋಗಿಬಿಟ್ಟರೆ, ಇನ್ನೊಂದು ಜಲಾಧಾರ ಪ್ರದೇಶವು ಕೆಲವು ಹರಿದಾರಿಗಳ ವರೆಗೂ ಇಲ್ಲ. ಊರವರಿಗೆ ಜೀವನಾಧಾರವಾದ ಕೆರೆಯದು.

ಹೀಗಿರುವಾಗ ಒಂದು ವರ್ಷ ಮಳೆ ಸರಿಯಾಗಿ ಬರಲೇ ಇಲ್ಲ. ಆದುದರಿಂದ ಪ್ರತಿ ಮಳೆಗಾಲದಲ್ಲೂ ತುಂಬುವ ಹಾಗೆ ಆ ಕೆರೆ ತುಂಬಲಿಲ್ಲ. ಆ ವರ್ಷದ ಬೇಸಗೆ ಬಹಳ ತೀವ್ರವಾಯಿತು. ಕೆರೆ ಪೂರ್ತಿ ಒಣಗಿ ಹೋಯಿತು, ಮರಮಟ್ಟುಗಳೆಲ್ಲಾ ಒಣಗ ತೊಡಗಿದುವು. ಜನರು ನೀರಿಗಾಗಿ ಎಲ್ಲೆಲ್ಲೋ ಪರದಾಡುತ್ತಿದ್ದರು. ಕೆಲವರು ಊರು ಬಿಟ್ಟು ದೂರಕ್ಕೆ ಹೊರಟು ಹೋದರು. ಬರದ ಬೇಗೆಯಿಂದ ಊರು ಬರಡಾಗ ತೊಡಗಿತು.

ಬೆಳೆದ ಮರಕ್ಕೆ ನೀರು ಎರೆಯ ಬೇಕಾಗಿಲ್ಲವಾದರೂ ಪದ್ಧತಿ ಬಿಡದೆ ಒಂದು ಬೊಗಸೆ ನೀರಾದರೂ ಎರೆಯುವ ಗಂಗೆ, ಇತ್ತೀಚೆಗೆ ಮರದ ಹತ್ತಿರ ಬರುವುದನ್ನೇ ಬಿಟ್ಟಿದ್ದಳು. ಒಂದು ದಿನ ಮನಸ್ಸು ಕೇಳದೆ, ಬಲಹೀನತೆಯಿಂದ ಕಾಲೆಳೆದು ಕೊಳ್ಳುತ್ತ ಮರದ ಬಳಿಗೆ ಬಂದಳು. ತಾನು ಬೆಳೆಸಿದ ಆ ಮರವು ಎಲ್ಲಿ ಒಣಗಿ ಹೋಗಿರುವುದೋ ಎಂದು ಅವಳಿಗೆ ಭಯ. ಆದರೆ ಆ ಮರವು ಸ್ವಲ್ಪವೂ ಬಾಡದೆ, ಎಂದಿನಂತೆ ಹಚ್ಚಗೆ ತಣ್ಣೆಳಲಿನಿಂದ ಕೂಡಿತ್ತು, ಮರತುಂಬಾ ದಟ್ಟವಾದ ಎಲೆಗಳು. ಅಲ್ಲಿಯ ವರೆಗೆ ಬರುವಷ್ಟರಲ್ಲಿ ಬಾಯಾರಿಕೆಯಿಂದ ನಿರ್ವಿಣ್ಣಳಾದ ಗಂಗೆಗೆ ಆ ಮರವನ್ನು ತಲಪಿದ ಕೂಡಲೇ ಕಣ್ಣು ಕತ್ತಲೆಯಾಯಿತು. "ಈ ಮರದ ಬುಡದಲ್ಲೇ ಪ್ರಾಣಹೋಗಲಿ" ಎಂದುಕೊಂಡು ಅಲ್ಲೇ ಮಲಗಿದಳು.

ತುಸುದೂರದಲ್ಲಿ ಒಣಗಿದ ಕೆರೆ ಅವಳ ಕಣ್ಣಿಗೆ ಭಣಭಣಿಸಿಕೊಂಡಿರಲು, ಮರವು ಚಲಿಸುವಂತೆ ಭ್ರಮೆ



ಯಾಯಿತು. ಮರದಕಾಂಡದಲ್ಲಿ ಮನುಷ್ಯನ ಮುಖವೊಂದು ಕಂಡಿತು. ಆ ಮುಖವು ಗಂಗೆಯನ್ನು ನೋಡುತ್ತ, "ಗಂಗಾ, ನನಗೆ ಬಹಳ ಕಾಲ ನೀರೆರೆದು ಬೆಳೆಸಿದಿ. ಈಗ ನೀನು ನೀರು ಕುಡಿ, ನನ್ನ ಒಂದು ಬೇರನ್ನು ಕಿತ್ತರೆ ಅದರಿಂದ ನಿನಗೆ ನೀರು ಸಿಗುತ್ತದೆ. ನೀರು ಕುಡಿದು ಮತ್ತೆ ಆ ಬೇರನ್ನು ಮೊದಲಿನ ಹಾಗೆಯೇ ಹುಗಿದಿಡು. ಈ ರಹಸ್ಯವನ್ನು ಮಾತ್ರ ಯಾರಿಗೂ ಹೇಳಬೇಡ. ಎಚ್ಚರಿಕೆ! ನೆನಪಿರಲಿ!" ಎಂದಿತು.

ಗಂಗೆ ತನ್ನ ಕಣ್ಣು ಕಿವಿಗಳನ್ನು ನಂಬದೆ ಭ್ರಮೆ ಎಂದುಕೊಂಡಳು. ಎದ್ದು ಅತ್ತಿತ್ತ ನೋಡಿದಳು. ಒಂದು ಕಲ್ಲಿನ ಮೇಲಿಂದಾಗಿ ಭೂಮಿಗಿಳಿದ ಮರದ ಬೇರನ್ನು ನೋಡಿದಳು. ಅವಳು ತನ್ನ ಬಲವನ್ನು ಸೇರಿಸಿ ಆ ಬೇರನ್ನು ಎಬ್ಬಿಸಿ ಎಳೆದಳು, ಕೂಡಲೇ ಆ ಬೇರು ಇಳಿದ ರಂಧ್ರದಿಂದ ನೀರು ಚಿಮ್ಮ ತೊಡಗಿತು. ಆನಂದದಿಂದ ಮುಖ ನೆನೆಸಿ ನೀರು

ಕುಡಿದು, ಮತ್ತೆ ಬೇರನ್ನು ಆ ರಂಧ್ರಕ್ಕೆ ಸೇರಿಸಿ ಮೊದಲಿನಂತಿಟ್ಟಳು ಗಂಗೆ.

ಅಷ್ಟರಲ್ಲಿ ಅಲ್ಲಿಗೆ ಒಬ್ಬ ಮುದುಕನು ಓಲಾಡುತ್ತಾ ಬಂದು "ಅಬ್ಬಾ ! ದಾಹ !" ಎನ್ನುತ್ತಾ ಬಿದ್ದನು. ಅವನಿಗೆ ನೀರು ಕೊಡಬೇಕೆಂದುಕೊಂಡು ಗಂಗೆ ಮತ್ತೆ ಬೇರನ್ನು ಮೇಲೆತ್ತಲು ನೋಡುವಾಗ, "ಗಂಗಾ ! ಎಚ್ಚರಿಕೆಯನ್ನು ಮರೆತೆಯಾ ? ಬೇರುಕಿತ್ತರೆ ನೀನು ಸಾಯುವಿ ! ಜೋಕೆ !" ಎಂದು ಈ ಮೊದಲಿನ ಕಂಠಸ್ವರವೇ ಬೆದರಿಸಿತು.

ಆ ಬೆದರಿಕೆಯನ್ನು ಸ್ವಲ್ಪವೂ ಲಕ್ಷ್ಯಮಾಡದೆ ಗಂಗೆ ಬೇರನ್ನು ಮೇಲಕ್ಕೆತ್ತಿ, ಮೇಲೆ ಚಿಮ್ಮುವ ನೀರಿನ ಧಾರೆಯ ಬಳಿಗೆ ವೃದ್ಧನನ್ನು ಎತ್ತಿ ತಂದಿಟ್ಟಳು. ಆ ನೀರನ್ನು ನೋಡಿಯೇ ಮುದುಕನಿಗೆ ಜೀವ ಬಂದು ಪರಮಾನಂದವಾಯಿತು. ಆ ನೀರನ್ನು ಕುಡಿದು ಉತ್ಸಾಹದಿಂದ ಎದ್ದು ನಿಂತನು.

ಗಂಗೆ ಆ ಬೇರನ್ನು ಯಥಾಸ್ಥಾನದಲ್ಲಿ ಇರಿಸುವ ಗೋಜಿಗೆ ಹೋಗದೆ, ಆ ಮುದುಕನೊಂದಿಗೆ, "ತಾತಾ, ಇಲ್ಲಿ ನೀರು ಇದೆಯೆಂದು ಸುತ್ತಮುತ್ತಲೂ ಇರುವ ವರಿಗೆ ನೀವೇ ತಿಳಿಸಬೇಕು. ಇನ್ನು ನಾನು ಹೋಗಿ ಹೇಳಲು ಸಾಧ್ಯವಿಲ್ಲ" ಎಂದಳು.

"ಆಗಲಿ ಮಗೂ, ಹೇಳುತ್ತೇನೆ ಎಲ್ಲರಿಗೂ" ಎಂದು ಹೇಳಿ ಮುದುಕನು ಹೊರಟುಹೋದನು.

ಗಂಗೆ ಆ ನೀರಿನ ಧಾರೆಯನ್ನೇ ನೋಡುತ್ತ ಕೈ ಮುಗಿದುಕೊಂಡು ಕಣ್ಣುಮುಚ್ಚಿ ನಿಂತಿದ್ದಳು. ನೀರಿನ ಧಾರೆ ದಪ್ಪವಾಗುತ್ತಾ, ಚಿಮ್ಮಿ ನೆಲಕ್ಕೆ ಬಿದ್ದು ಹರಿಯುತ್ತಾ ಕೆರೆಯ ಕಡೆಗೆ ಹೋಗ ತೊಡಗಿತು. ಗಂಗೆ ಮರದ ಕಡೆಗೆ ತಿರುಗಿ "ಹೇ, ಜಲವೃಕ್ಷ ದೇವಾ ! ನಿನ್ನ ಮಾತನ್ನು ಕೇಳದೆ ಊರ ಜನರ ಪ್ರಾಣವನ್ನುಳಿಸಲು ಈ ರೀತಿ ಮಾಡಿದೆ. ಅವರೆಲ್ಲಾ ಬದುಕುವ ಹಾಗಾದರೆ ನಾನೊಬ್ಬಳು ಇಲ್ಲದಿದ್ದರೂ ಚಿಂತೆ ಇಲ್ಲ, ನನ್ನ ಪ್ರಾಣವನ್ನು ಬಲಿ ತೆಗೆದುಕೋ !" ಎಂದು ಹೇಳಿಕೊಂಡಳು.

ಆಗ ಮರದಕಾಂಡದಲ್ಲಿ ಹಿಂದೆ ಕಂಡ ಮುಖವೇ ಪ್ರತ್ಯಕ್ಷವಾಯಿತು. "ಗಂಗೇ ! ನಿನ್ನನ್ನು ಪರೀಕ್ಷೆ ಮಾಡಬೇಕೆಂದೇ ಹಾಗೆ ಹೆದರಿಸಿದೆ. ನಿನ್ನ ಪ್ರಾಣ ತೆಗೆಯುವ ಅಗತ್ಯವೇನಿದೆಯಮ್ಮಾ ? ನಿಜಕ್ಕೂ ನೀನೇ ನನ್ನ ಅಮ್ಮ. ನನಗೆ ಜಲದಾನ ಮಾಡಿ ಬೆಳೆಸಿದ ತಾಯಿ ನೀನು. ಅದಕ್ಕೆ ಪ್ರತಿಫಲವಾಗಿ ಈ ಕೆರೆ ಯನ್ನು ತುಂಬಿಸಿ ನಿನ್ನನ್ನು ಸಂತೋಷಪಡಿಸುತ್ತೇನೆ. ಇನ್ನೆಂದಿಗೂ ಈ ಪ್ರಾಂತದವರಿಗೆ ನೀರಿನ ಕ್ಷಾಮ ಬಾರದಂತೆ ಕೆರೆ ತುಂಬಿಕೊಂಡೇ ಇರುತ್ತದೆ" ಎಂದು ಹೇಳಿ ಆ ಮುಖವು ಮಾಯವಾಯಿತು,

ಹೀಗೆ ಆ ಕೆರೆ ಒಳ್ಳೆಯ ನೀರಿನಿಂದ ತುಂಬಿತು. ಸುತ್ತುಮುತ್ತಲವರಿಗೆಲ್ಲಾ ಜೀವ ಬಂತು.





ಸತ್ಯವ್ರತನ ಭಕ್ತಿಭಾವದ ಮಾತುಗಳನ್ನು ಕೇಳಿ ಆ ಮಹಾ ಮೀನು ಸಮುದ್ರದ ಮಧ್ಯಕ್ಕೆ ಹೋಗಿ ಮಹಾ ಪರ್ವತದ ಹಾಗೆ ಸಾಗರದುದ್ದಕ್ಕೂ ನೀಡಿ ಬೆಳೆದು, ತಲೆಯೆತ್ತಿ ತೀರದಲ್ಲಿ ಹುಲ್ಲು ಕಡ್ಡಿಯಂತೆ ನಿಂತಿರುವ ಸತ್ಯವ್ರತನನ್ನು ನೋಡಿ, "ದೊಡ್ಡ ಗುಣಗಳು ತುಂಬಿದ ಓ ಸತ್ಯವ್ರತಾ, ನಿನ್ನ ವಾಕ್ಯವು ಅಮೋಘವಾಗಿ ಫಲಿಸಿಬಿಟ್ಟಿತು. ನೋಡಿದೆಯಾ? ನಾನು ಇನ್ನೂ ಬೆಳೆದು ಕಡೆಗೆ ಏನಾಗಿ ಹೋಗುವೆನೋ!" ಎಂದು ಮೇಘ ಘೋಷದಂತೆ ಹೇಳಿತು.

ಆಗ ಸತ್ಯವ್ರತನು ಕೈಗಳನ್ನೆತ್ತಿ ಜೋಡಿಸಿ. "ಮತ್ಸ್ಯರೂಪದಲ್ಲಿರುವ ಶ್ರೀಮನ್ನಾರಾಯಣಾ! ರಕ್ಷಣೆಯನ್ನು ಬೇಡುವ ನೆವನದಲ್ಲಿ ಬಂದು ನನ್ನನ್ನು ರಕ್ಷಿಸಲಿಕ್ಕಾಗಿಯೇ ಮತ್ಸ್ಯಾವತಾರವನ್ನೆತ್ತಿರುವೆ. ನಿನ್ನ ಲೀಲೆಗಳ ರಹಸ್ಯ ತಿಳಿಯಲು ನನ್ನಿಂದಾದೀತೆ?" ಎಂದು ವಿಧವಿಧವಾಗಿ ಸ್ತುತಿ ಮಾಡಿದನು.

ಆಗ ಮತ್ಸ್ಯಾವತಾರದಲ್ಲಿದ್ದ ಮಹಾವಿಷ್ಣು "ಎಲೈ ರಾಜನೇ. ಇನ್ನು ಏಳು ದಿನಗಳಲ್ಲಿ ಕಲ್ಪಾಂತವು ಬರುತ್ತದೆ. ಆಗ ಉಕ್ಕುವ ಪ್ರಳಯ ಜಲದಲ್ಲಿ ಎಲ್ಲವೂ ಮುಳುಗುತ್ತದೆ. ಜ್ಞಾನವೂ, ಓಷಧಿಗಳೂ ಬೀಜಗಳೂ ನಶಿಸಿ ಹೋಗಬಾರದು. ಮುಂದಿನ ಕಲ್ಪಕ್ಕೆ ಅವುಗಳು ಇಲ್ಲದೇ ಹೋದರೆ ಹೇಗೆ ಹೇಳು. ಈಗ ನಿನಗಾಗಿ ದೊಡ್ಡದೊಂದು ನೌಕೆ ಗಾಢಾಂಧಕಾರದಲ್ಲಿ ಬೆಳಗುತ್ತ ಬರುತ್ತದೆ. ಅದರಲ್ಲಿ ಸಪ್ತರ್ಷಿಗಳು ಇದ್ದಾರೆ. ಆ ಬೆಳಕು ಅವರದೇ.

"ಓಷಧಿಗಳನ್ನೂ, ಸರ್ವ ವಿಧ ಬೀಜಗಳ ರಾಶಿಯನ್ನೂ ಆ ನೌಕೆಯೊಳಗೆ ಸೇರಿಸು. ನನ್ನ ತಲೆಯ ಮೇಲಿರುವ ಕೊಂಬಿಗೆ ನಾವೆಯನ್ನು ಸಿಕ್ಕಿಸಿಟ್ಟುಬಿಡು. ಆ ನಾವೆ ತೆರೆಗಳ ಹೊಡೆತಕ್ಕೆ ಮುಳುಗಿ ಹೋಗದಂತೆ ನೋಡಿಕೊಳ್ಳುವ ಭಾರ ನನ್ನದು. ಬ್ರಹ್ಮನು ನಿದ್ದೆಯಿಂದೇಳುವ ವರೆಗೂ ಧ್ರುವನನ್ನು ದಿಕ್ಸೂಚಿಯಾಗಿ ಇಟ್ಟುಕೊಂಡು ನಾವೆ ಜಲದಲ್ಲಿ ತೇಲಾಡಿಕೊಂಡಿರುತ್ತದೆ. ಅಥವಾ ನಿರ್ದಿಷ್ಟವಿಲ್ಲದೆ ಪ್ರಯಾಣಿಸಿಕೊಂಡಿರುತ್ತದೆ. ಮತ್ತೆ ಬರುವ ಕಲ್ಪದಲ್ಲಿ ನೀನು ವೈವಸ್ವತ ಎಂಬ ಹೆಸರಿನ ಮನುವಾಗಿರುವಿ.

೧. ಮತ್ಸ್ಯಾವತಾರ



ನೆನಪಿಟ್ಟುಕೋ" ಎಂದು ಆದೇಶ ಮಾಡಿತು. ಸತ್ಯವ್ರತನು ವಿಷ್ಣುವಿನ ಆಜ್ಞೆಯನ್ನು ಶಿರದೊಳಾಂತು ವಿನಮ್ರತೆಯಿಂದ ನಮಸ್ಕರಿಸಿದನು.

ಮತ್ಸ್ಯಾವತಾರವು ಬ್ರಹ್ಮಾಂಡವಾದ ತನ್ನ ನಾಲ್ಕು ರೆಕ್ಕೆಗಳನ್ನು ಓಲಾಡಿಸುತ್ತ ಬಾಲದಿಂದ ನೀರನ್ನು ತೊಳಸುತ್ತ, ಬೆಟ್ಟಗಳ ಸಾಲಿನಂತೆ ಹೊರಳುವ ತೆರೆಗಳನ್ನು ಸೀಳುತ್ತ, ಲೀಲಾಜಾಲವಾಡಿಕೊಂಡು ಸಮುದ್ರದೊಳಗೆ ಹೊರಟು ಹೋಯಿತು.

ಬ್ರಹ್ಮನು ಗಾಢನಿದ್ರೆಯಲ್ಲಿ ಮುಳುಗಿ ಹೋದನು. ಅಂಧಕಾರದ ಜಗತ್ತಿನಲ್ಲಿ ಏನೇನೋ ವಿಲಯ ಕಾಂಡಗಳು ನಡೆಯುತ್ತಿದ್ದುವು. ಹೇಳುವವರು ಕೇಳುವವರು ಯಾರೂ ಇಲ್ಲ.

ಆ ಅಂಧಕಾರದ ಜಲಕಾಲದಲ್ಲಿ ಹಯಗ್ರೀವನಾದ ಸೋಮಕಾಸುರನು, ತನ್ನ ವಾಸ ಸ್ಥಾನವಾದ ತಲಾತಲವನ್ನು ಬಿಟ್ಟು ಸಮುದ್ರದ ಮೇಲೆ ಬಂದು, ಗಬ್ಬಿಲದ ಹಾಗೆ ಬ್ರಹ್ಮನ ಸತ್ಯಲೋಕದ ಕಡೆಗೆ ಹಾರಿದನು. ಅಂಧಕಾರವನ್ನು ಚಿರಸ್ಥಾಯಿ ಗೊಳಿಸುವುದೇ ಅವನ ಉದ್ದೇಶ. ಪುನಃಸೃಷ್ಟಿಯನ್ನು ತಡೆಯುವುದೇ ಅವನ ಗುರಿ. ಅವನು ನಿದ್ರಿಸಿಕೊಂಡಿದ್ದ ಬ್ರಹ್ಮನ ಪಕ್ಕದಲ್ಲೇ ಹೊಂಚಿಕೊಂಡು ಕಾದಿದ್ದನು.

ಗಾಢ ನಿದ್ರೆಯಲ್ಲಿರುವ ಬ್ರಹ್ಮನು ಒಂದು ಸಾರಿ ಆಕಳಿಸಿದಾಗ, ಅವನ ನಾಲ್ಕು ಮುಖಗಳಿಂದ ಬಿಳುಪು, ಕೆಂಪು, ಹಳದಿ ಮತ್ತು ನೀಲ ಬಣ್ಣಗಳಿಂದ ಪ್ರಕಾಶಿಸುವ ನಾಲ್ಕು ವೇದಗಳು ಹೊರಗೆ ಬಂದು ಅವನ ಪಕ್ಕದಲ್ಲಿ ಬಿದ್ದುವು. ಸೋಮಕಾಸುರನು ಅವುಗಳನ್ನು ಅಪಹರಿಸಿಕೊಂಡು ಹೋಗಿ, ಸಮುದ್ರ ತಳದ ಬಂಡೆಗಳ ಎಡೆಯಲ್ಲಿ ಅಡಗಿಸಿಟ್ಟನು.

ಈ ಸೋಮಕಾಸುರನು ದೇವತೆಗಳಿಗೂ, ದೇವಾಧಿದೇವನಾದ ವಿಷ್ಣುವಿಗೂ ಪ್ರಬಲ ವಿರೋಧಿ. ವೇದಗಳು ಇಲ್ಲದೆ ಹೋದರೆ ಬ್ರಹ್ಮನಿಗೆ ಸೃಷ್ಟಿಕಾರ್ಯ ಮಾಡಲು ಸಾಧ್ಯವಾಗದು. ಪ್ರತಿ ಕಲ್ಪಗಳಿಗೂ ಅಗತ್ಯವಾದ ಒಳಿತುಗಳನ್ನೂ, ಪ್ರಗತಿಯನ್ನೂ ನೆಲೆಗೊಳಿಸುವಂತಹ ವಿಷ್ಣುವಿನ ಸಂಕಲ್ಪವನ್ನು ಭಗ್ನಗೊಳಿಸಿಬಿಟ್ಟರೆ, ನಿದ್ರೆಯಿಂದೆದ್ದ ಬ್ರಹ್ಮನು ಏನೂ ಮಾಡದೆ ಜಡನಾಗಿ ಹೋಗುತ್ತಾನೆ.

ಪ್ರಳಯ ಜಲವು ಭೂಮಿಯನ್ನು ಪೂರ್ತಿ ಮುಳುಗಿಸುವ ಕಾಲದಲ್ಲಿ, ಇನ್ನೂ ಮುಳುಗದ ನೆಲದಲ್ಲಿ ನಿಂತು ಇದಿರು ನೋಡಿಕೊಂಡಿದ್ದ ಸತ್ಯವ್ರತನಿಗೆ, ಸುತ್ತುಮುತ್ತಲಿನ ಗಾಢಾಂಧಕಾರದಲ್ಲಿ, ದೂರದಲ್ಲಿ ಚಿಕ್ಕದೊಂದು ಬೆಳಕು, ಚುಕ್ಕೆಯಂತೆ ಕಾಣಿಸಿ, ಸಮೀಪಿಸುತ್ತಾ ದೊಡ್ಡದಾಗುತ್ತಾ ಬಂತು ಆ ನೌಕೆ.

ಕೂಡಲೇ ಸತ್ಯವ್ರತನು ಓಷಧಿಗಳನ್ನೂ, ನಾನಾ ಬಗೆಯ ಬೀಜರಾಶಿಗಳನ್ನೂ ಆ ನೌಕೆಗೆ ಸೇರಿಸಿ, ತಾನು ಆ ನೌಕೆಯೊಳಗೆ ಸೇರಿಕೊಂಡನು. ಕೂಡಲೇ ಆ ಉಳಿದಿದ್ದ ನೆಲವೂ ಮುಳುಗಿ ಹೋಯಿತು. ಸತ್ಯವ್ರತನು ನಾರಾಯಣ ಸ್ಮರಣೆ ಮಾಡುತ್ತಾ, ನೌಕೆಯಲ್ಲಿ ಪ್ರಯಾಣ ಮಾಡಿಕೊಂಡಿದ್ದನು. ಆ ನೌಕೆ

ಮಹಾಮತ್ಸ್ಯದ ತಲೆಯ ಕೊಂಬಿಗೆ ಸಿಕ್ಕಿಕೊಂಡಿತ್ತು. ನಕ್ಷತ್ರದಂತೆ ಹೊಳೆಯುವ ಆ ಕೊಂಬಿನ ಕೊನೆಯಲ್ಲಿ ಮಹಾಸರ್ಪವು ಹಗ್ಗದಂತೆ ಸುತ್ತಿಕೊಂಡು ನಾವೆಯನ್ನೂ ಸೇರಿಸಿ ಹಿಡಿದುಕೊಂಡಿತ್ತು. ಅದು ತನ್ನ ಹೆಡೆಯನ್ನು ಹಡಗಿನ ಹಾಯಿಯಂತೆಯೇ ಬಿಡಿಸಿಕೊಂಡಿತ್ತು. ಪ್ರಳಯ ಪ್ರಭಂಜನಕ್ಕೆ ತಕ್ಕಹಾಗೆ ಹೆಡೆಯನ್ನು ಓಲಾಡಿಸುತ್ತ, ಉಕ್ಕುಕ್ಕಿ ಏಳುವ ಬೀಳುವ ತೆರೆಗಳಿಂದ ಹಡಗಿಗೇನೂ ಆಗದಂತೆ ಹೆಡೆಯನ್ನು ಆಡಿಸಿ ಕಾಪಾಡಿಕೊಂಡಿತ್ತು. ಧ್ರುವ ತಾರೆಯನ್ನೇ ಗುರುತಾಗಿಟ್ಟುಕೊಂಡು ತೇಲಿಸುತ್ತಿತ್ತು.

ಸಮುದ್ರದ ಅಡಿಯಲ್ಲಿ ಕದ್ದುಕೊಂಡ ವೇದಗಳನ್ನು ಕಾದುಕೊಂಡೇ ಇದ್ದನು ಸೋಮಕಾಸುರ. ಅವನು ವೇದಗಳನ್ನು ಅಡಗಿಸಿಟ್ಟ ಬಂಡೆಗಳ ಸುತ್ತೂ ವಿರಾಮವಿಲ್ಲದೆ ಪ್ರದಕ್ಷಿಣೆ ಬರುತ್ತ ಕಟ್ಟೆಚ್ಚರದಿಂದ ಕಾವಲು ಕಾಯುತ್ತಿದ್ದನು. ಮಾಯಾವಿಯಾದ ವಿಷ್ಣು ಯಾವಾಗ ಯಾವ ರೂಪದಲ್ಲಿ ಬಂದು ಆ ವೇದಗಳನ್ನು ಕಿತ್ತುಕೊಂಡು ಹೋಗುವನೋ ಎಂದು ಅವನಿಗೆ ಕೆಟ್ಟ ಭಯ. ಆ ನಾಲ್ಕು ವೇದಗಳೂ ನಾಲ್ಕು ಶಿಶುಗಳ ರೂಪ ತಾಳಿ ಕೇವು ಕೇವೆಂದು ಆರ್ತನಾದ ಮಾಡ ತೊಡಗಿದುವು.

ಮತ್ಸ್ಯಾವತಾರವು ನೌಕೆಯನ್ನು ಸರ್ಪದ ವಶಕ್ಕೆ ಬಿಟ್ಟುಕೊಟ್ಟು, ವೇದಗಳನ್ನು ಹುಡುಕುತ್ತಾ ಹೋಯಿತು. ವೇದ ಶಿಶುಗಳ ಆರ್ತನಾದದಿಂದ ಅಲ್ಲಿಗೇ ಬಂತು ಮಹಾಮತ್ಸ್ಯ.

ಅದನ್ನು ನೋಡಿ ಸೋಮಕಾಸುರನು, ಹೆದರುತ್ತಾ, ಮೊಂಡು ಧೈರ್ಯದಿಂದ ಮುಳ್ಳುಗದೆಯನ್ನೆತ್ತಿ ಅದನ್ನು ಹೊಡೆಯ ತೊಡಗಿದನು.

ಆಗ ವಿಷ್ಣು ನಡುಭಾಗದವರೆಗೆ ಮತ್ಸ್ಯವಾಗಿದ್ದು, ಚತುರ್ಬಾಹುಗಳೊಂದಿಗೆ ಅವತರಿಸಿದನು. ಆ ಮತ್ಸ್ಯಮೂರ್ತಿಗೂ ಸೋಮಕಾಸುರನಿಗೂ ಘೋರ ಸಂಗ್ರಾಮವು ನಡೆಯಿತು.



ಕಡೆಗೆ ಸೋಮಕಾಸುರನು ಸಮುದ್ರದ ತಳದಲ್ಲಿ ಓಡಿ ಹೋಗಲು ನೋಡಿದನು. ಆಗ ವಿಷ್ಣು ಅವನನ್ನು ಚಕ್ರಾಯುಧದಿಂದ ಚೂರುಚೂರು ಮಾಡಿದನು.

ಆ ಮೇಲೆ ವಿಷ್ಣು ಶಿಶುಗಳ ರೂಪದಲ್ಲಿರುವ ಚತುರ್ವೇದಗಳನ್ನು. ಒಂದೊಂದು ಕಂಕುಳಲ್ಲಿ ಎರಡೆರಡರಂತೆ ಎತ್ತಿಕೊಂಡು ನೀರಿನ ಮೇಲಕ್ಕೆ ಬಂದನು. ಆಗ ಆ ವೇದ ಶಿಶುಗಳು ತಾಯಿಯ ಕೈ ಸೇರಿದಂತೆ ಸಂತೋಷದಿಂದ ವಿಷ್ಣುವಿನ ಕಂಠದಲ್ಲಿರುವ ಶ್ರೀವತ್ಸ, ಕೌಸ್ತುಭ ಮಣಿಗಳನ್ನು ಪುಟ್ಟ ಕೈಗಳಲ್ಲಿ ಹಿಡಿದುಕೊಂಡು ಆಡುತ್ತ ಕೇಕೇ ಹಾಕಿ ನಗುತ್ತಿದ್ದುವು. ನಾಲ್ಕು ಶಿಶುಗಳೂ ಬಿಳುಪು, ಕೆಂಪು, ಹಳದಿ, ನೀಲ ವರ್ಣಗಳ ಕಾಂತಿಯಿಂದ ಬೆಳಗುತ್ತಿದ್ದುವು.

ವಿಷ್ಣುವಿನ ಮತ್ಸ್ಯಾವತಾರ ಮೂರ್ತಿಯನ್ನು ನೋಡಿ ಋಷಿಗಳೂ ಸತ್ಯವ್ರತನೂ ಪರಮಾನಂದಗೊಂಡು ಕೈಜೋಡಿಸಿ ನಮಸ್ಕಾರ ಮಾಡುತ್ತಾ ಸ್ತೋತ್ರಗೈದರು. ಈ ಸ್ತೋತ್ರಾರಾವ ಹೊರಡು



ತ್ತಿದ್ದಂತೆ ಅಂಧಕಾರಯುಗವು ಕ್ರಮಿಸುತ್ತಿರಲು, ನೂತನ ಕಲ್ಪದ ಉಷಃ ಕಾಲದ ಮುಂಬೆಳಕು ಮೂಡುತ್ತಾ, ಪ್ರಳಯ ಜಲವು ಶಾಂತವಾಗಿ ಕುಂದುತ್ತಾ, ಭೂಭಾಗವು ತೋರತೊಡಗಿತು. ಬ್ರಹ್ಮನು ಮೈಮುರಿದುಕೊಂಡು ಏಳುತ್ತಿರಲು, ಹೊಚ್ಚಹೊಸ ಕಲ್ಪವು ಪ್ರಾರಂಭವಾಗ ತೊಡಗಿತು.

ಬ್ರಹ್ಮನಿಗೆ ಹಗಲು ಎಷ್ಟು ಪ್ರಮಾಣದಲ್ಲಿದ್ದಿತೋ ರಾತ್ರಿಯೂ ಅಷ್ಟೇ ಪ್ರಯಾಣದಲ್ಲಿದ್ದಿತು. ಅವನ ನಿದ್ರಾಕಾಲವು ಪೂರ್ತಿಯಾಗಿ ಹಗಲು ಹುಟ್ಟುವುದಕ್ಕೆ ಮೊದಲೇ, ಸರಸ್ವತಿ ಎದ್ದು ವೀಣೆಯನ್ನು ಸರಿಪಡಿಸಿಕೊಂಡು ಉದಯಕಾಲಕ್ಕೆ ತಕ್ಕ ಭೂಪಾಳ ರಾಗವನ್ನು ಹೊರಡಿಸ ತೊಡಗಿದಳು. ಬ್ರಹ್ಮನು ಎದ್ದು ನಾಲ್ಕು ಮುಖಗಳಿಂದ ಕೆಳಗೆ, ಆಚೆಈಚೆ ನೋಡಿದನು. ಅವನ ಸರ್ವಾಧಾರವಾದ ವೇದಗಳು ಅಲ್ಲೆಲ್ಲಿಯೂ ಇಲ್ಲ! ವೇದಗಳನ್ನು ಕಾಣದೆ ದಿಗಿಲುಬಡೆದ ಮುಖಗಳನ್ನು ಎತ್ತಲಾಗದೆ ಬ್ರಹ್ಮನು ಚಿಂತಿಸಿಕೊಂಡಿರಲು. ಮತ್ಸ್ಯಾವತಾರದ ವಿಷ್ಣು ಅವನ ಮುಂದೆ ಬಂದು, ನಾಲ್ಕು ವೇದಗಳನ್ನೂ ಅವನಿಗೆ ಒಪ್ಪಿಸಿದನು.

ಆಗ ಬ್ರಹ್ಮನು ಮಹಾವಿಷ್ಣುವಿನ ಮತ್ಸ್ಯಾವತಾರವನ್ನು ತನ್ನ ಕಣ್ಣುಗಳಿಗೆ ಹಬ್ಬವಾಗುವಂತೆ ನೋಡುತ್ತ, ಕೈಗಳನ್ನು ಜೋಡಿಸಿ ನಾಲ್ಕು ಮುಖಗಳಿಂದಲೂ ಕೀರ್ತಿಸಿದನು.

"ಶ್ರೀಮನ್ನಾರಾಯಣಾ! ನಿನ್ನ ಮತ್ಸ್ಯಾವತಾರವನ್ನು ಧ್ಯಾನಿಸಿದವರಿಗೆ ಪ್ರಳಯದಂತಹ ಮಹಾ ವಿಪತ್ತುಗಳು ಬಾರದೆಯೇ ಹೋಗಲಿ. ಅಜ್ಞಾನಾಂಧಕಾರವು ತೊಲಗಲಿ." ಎಂದನು ಬ್ರಹ್ಮ.

ಹೀಗೆ ಮತ್ಸ್ಯಾವತಾರದ ಉದ್ದೇಶವು ಪೂರ್ತಿ ನೆರವೇರಿತು. ಸತ್ಯವ್ರತನು ವೈವಸ್ವತಮನುವಾಗಿ ಅವತರಿಸಿದನು. ಅವನಿಂದ ಭೂಭಾಗಗಳಲ್ಲಿ ಬಿದ್ದ ಬೀಜಗಳಿಂದ, ಔಷಧಿಗಳಿಂದ ಮತ್ತೆ ಭೂಮಿ ಹಸಿರಾಗ ತೊಡಗಿತು.

ವಿಷ್ಣು ಮತ್ಸ್ಯಾವತಾರವನ್ನು ಬಿಟ್ಟು ವೈಕುಂಠವನ್ನು ಸೇರಿದ ಮೇಲೆ ಬ್ರಹ್ಮನು ವೇದಗಳ ಸಹಾಯದಿಂದ ಸೃಷ್ಟಿಕಾರ್ಯ ಪ್ರಾರಂಭಿಸಿದನು. ಸತ್ಯವ್ರತನು ಈ ಹೊಸ ಕಲ್ಪಕ್ಕೆ ವಿವಸ್ವಂತ ನಾಮಕನಾಗಿ ಉದಯಿಸಿದ ಸೂರ್ಯನ ಪುತ್ರನಾಗಿ ಶ್ರಾದ್ಧದೇವನೆಂದೂ, ವೈವಸ್ವತನೆಂದೂ ಹೆಸರು ಪಡೆದು ಮನುವಾದನು.

ಸಪ್ತರ್ಷಿಗಳು ಆಕಾಶವನ್ನು ಸೇರಿ. ತಮ್ಮ ತಮ್ಮ ಸ್ಥಾನಗಳಲ್ಲಿದ್ದು, ಸಪ್ತರ್ಷಿಮಂಡಲವೆಂಬ ಹೆಸರಿನಿಂದ ಪ್ರಕಾಶಿಸುತ್ತ ಧ್ರುವನಿಗೆ ಪ್ರದಕ್ಷಿಣೆ ಬರುತ್ತಿದ್ದರು.

ಹೀಗೆ ಸೂತನು ಹೇಳುತ್ತಿರಲು, ಶೌನಕಾದಿ ಮುನಿಗಳು, "ಸೂತಮುನೀಂದ್ರಾ, ನಾವು ಆ ಧ್ರುವನ ಕಥೆಯ ಸ್ವಾರಸ್ಯವನ್ನು ತಿಳಿಯಬೇಕೆಂದಿದ್ದೇವೆ. ದಯವಿಟ್ಟು ಹೇಳಬೇಕು" ಎಂದು ಪ್ರಾರ್ಥಿಸಿದರು,

ಸೂತನು ಹೇಳ ತೊಡಗಿದನು:

ಈ ಮಹಾವಿಶ್ವದಲ್ಲಿ ಉನ್ನತೋನ್ನತವಾದ ಸ್ಥಾನವೇ ಧ್ರುವಮಂಡಲ. ಅದೇ ವಿಶ್ವಸ್ವರೂಪನಾದ ವಿಷ್ಣುವಿನ ತಲೆ ಇರುವ ಜಾಗವೂ ಆಗಿದೆ.

ಅಂತಹ ಅತ್ಯುನ್ನತ ಪದವಿಯನ್ನು ಹೊಂದಿದ ಧ್ರುವನು ಉತ್ತಾನಪಾದನೆಂಬ ರಾಜನಿಗೆ ಮಗನಾಗಿ ಹುಟ್ಟಿದವನು. ಧ್ರುವನ ತಾಯಿಯಾದ ಸುನೀತಿ ಉತ್ತಾನಪಾದರಾಜನ ಹಿರಿಯ ಹೆಂಡತಿ. ಸುರುಚಿ ಎಂಬುವಳು ಅವನ ಎರಡನೆಯ ಚಿಕ್ಕ ಹೆಂಡತಿ. ರಾಜನಿಗೆ ಸುರುಚಿಯ ಮೇಲೆಯೇ ಹೆಚ್ಚಿನ ಪ್ರೀತಿ.

ಒಂದು ದಿನ ಉತ್ತಾನಪಾದನು ಸುರುಚಿಯ ಮಗನಾದ ಉತ್ತಮನನ್ನು ತೊಡೆಯ ಮೇಲೆ ಕೂರಿಸಿಕೊಂಡು ಮುದ್ದು ಮಾಡುತ್ತಿದ್ದಾಗ, ಧ್ರುವನು ಅಲ್ಲಿಗೆ ಬಂದು, ತಾನು ಕೂಡಾ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಬೇಕೆಂಬ ಬಾಲ್ಯ ಚಾಪಲ್ಯದ ಆಶೆಯಿಂದ ತಂದೆಯ ತೀರ ಹತ್ತಿರ ಬಂದು, ಪುಟ್ಟ ಪುಟ್ಟ ಕೈಗಳನ್ನು ಚಾಚಿದನು. ಸುರುಚಿಯೂ ಅವನ ಹತ್ತಿರವೇ ಕುಳಿತಿದ್ದಳು. ಅವಳಿಗೆ ಅಂಜಿ, ರಾಜನು ಧ್ರುವನನ್ನು ನೋಡಿಯೂ ನೋಡದವನಂತೆ ಸುಮ್ಮನಿದ್ದನು. ತಮ್ಮನನ್ನು ಕುಳ್ಳಿರಿಸಿದ ಹಾಗೆಯೇ ಅಪ್ಪನು ತನ್ನನ್ನು ಕೂಡಾ ಎತ್ತಿ ಕುಳ್ಳಿರಿಸಿಕೊಳ್ಳುವ ನೆಂದು ಆಶೆಪಟ್ಟ ಧ್ರುವನು ಮುಖ ಬಾಡಿಸಿ ಕೊಂಡನು. ಕಣ್ಣೀರು ತುಂಬಿತು. ಅವನ ಗಲ್ಲಗಳ ಮೇಲೆ ಕಂಬನಿ ಮುತ್ತುಗಳು ಹೊಳೆದವು.

ಅದನ್ನು ನೋಡಿ ಸುರುಚಿ ಕಿಟಕಿಟನೆ ನಕ್ಕು, "ಆ ಗತಿಗೇಡಿಯ ಹೊಟ್ಟೆಯಲ್ಲಿ ಹುಟ್ಟಿದವನೇ! ನೀನು ಎಷ್ಟು ತಪಸ್ಸು ಮಾಡಿದರೂ ನನ್ನ ಮಗನಿಗೆ ಸಮಾನನಾಗಿ ತೊಡೆಯ ಮೇಲೆ ಕುಳಿತುಕೊಳ್ಳುವ ಭಾಗ್ಯ ಬಾರದೋ ಹುಡುಗಾ! ನನ್ನ ಹೊಟ್ಟೆಯಲ್ಲಿ ಹುಟ್ಟಬೇಕಿತ್ತು ಪಾಪ! ಹಾಗೆ ನನ್ನ ಹೊಟ್ಟೆಯಲ್ಲಿ ಹುಟ್ಟಿರುತ್ತಿದ್ದರೆ ಈ ಭಾಗ್ಯ ಬರುತ್ತಿತ್ತು. ಇನ್ನು ಈ ಜನ್ಮದಲ್ಲಿ ಇಷ್ಟೇ! ನೀನೇನೋ ಮಹಾಬಲ್ಲವನ ಹಾಗೆ ನಾರಾಯಣ ಸಂಕೀರ್ತನೆ ಮಾಡುತ್ತೀ. ಏನಾದರೂ ಪ್ರಯೋಜನ ಉಂಟೇ? ಬೇಕಾದರೆ ಹೋಗಿ ತಪಸ್ಸು ಮಾಡಿ ನಾರಾಯಣನನ್ನು ಮೆಚ್ಚಿಸಿ



ಈ ಭಾಗ್ಯ ಕೊಡುತ್ತಾನೇನೋ ಕೇಳಿನೋಡು!" ಎಂದು ಅವಹೇಳನೆ ಮಾಡಿದಳು.

ಅವಳ ಮಾತುಗಳು ಧ್ರುವನ ಎಳೆಯ ಮನಸ್ಸಿಗೆ ಚೆನ್ನಾಗಿ ನಾಟಿ, ಹೃದಯ ಕುದಿಯ ತೊಡಗಿತು. ರೋಷವು ಉಕ್ಕತೊಡಗಿತು, ಕೊರಡೆ ತೆಗೆದುಕೊಂಡು ಸುರುಚಿಯನ್ನು ಛಡಛಡ ಹೊಡೆಯೋಣವೆನಿಸಿತು. ಕತ್ತಿಯಿಂದ ಸೀಳಬೇಕೆಂದು ತೋರಿತು. ಆಗ ಸುರುಚಿ ಮತ್ತೊಮ್ಮೆ, "ಹೋಗೋ! ದೇವಾಧಿದೇವ ನಾರಾಯಣನನ್ನು ನಂಬು. ತಪಸ್ಸು ಮಾಡು. ಸುಮ್ಮನೆ ಅಪ್ಪನ ತೊಡೆ ಏರಬೇಕೆಂದರೆ ಹೇಗೆ?" ಎಂದಳು. ಆ ಕ್ಷಣದಲ್ಲಿ ಧ್ರುವನಿಗೆ ಅವಳು ದಿವ್ಯ ಮಂತ್ರವನ್ನು ಉಪದೇಶಿಸಿದ ಗುರುವಿನಂತೆ ಕಂಡಳು. ಅಂತಹ ಮಹತ್ತರವಾದ ಉಪದೇಶಕ್ಕೆ ಪಾತ್ರನಾಗ ದಿದ್ದ ಉತ್ತಮನು ಅಭಾಗ್ಯವಂತ ಹೆಡ್ಡನ ಹಾಗೆ ಕಾಣಿಸಿದನು. ಉತ್ತಾನಪಾದ ಮಹಾರಾಜನು ಕತ್ತಲೆಯ ಬಲೆಯೊಳಗೆ ಸಿಕ್ಕಿಕೊಂಡು ತೊಳಲಾಡು



ತ್ತಿರುವ ಪಾಪದ ಜಿಂಕೆಯಂತೆ ಕಂಡನು ಧ್ರುವನಿಗೆ. ಗುರೂಪದೇಶ ಪಡೆದು ಹೊರಡುವ ಶಿಷ್ಯನ ಹಾಗೆ ಧ್ರುವನು ಸುರುಚಿಗೆ ಬಾಗಿ ನಮಸ್ಕಾರ ಮಾಡಿ ಅಲ್ಲಿಂದ ಹೊರಟನು. ಬಾಲಧ್ರುವನ ಆ ಚೇಷ್ಟೆಗಳನ್ನು ನೋಡಿ ಅರ್ಥಮಾಡಿಕೊಳ್ಳಲಾಗದೆ ಸುರುಚಿ ಬೆರಗಾಗಿ, "ಪಾಪ, ಒಳ್ಳೇ ಹುಡುಗನೇ! ಬೈದರೂ ರಂಪ ತೋರಿಸದೆ, ನಮಸ್ಕಾರ ಮಾಡಿ ಹೋದ. ಮತ್ತೇನು ಮಾಡಿಯಾನು! ನನ್ನ ಮುಂದೆ ಬಾಯಿ ತೆರೆಯುವ ಧೈರ್ಯ ಬರುವುದುಂಟೆ? ಅವನ ಅಮ್ಮನಿಗಾದರೂ ಬಂದೀತೇ?" ಎಂದು ಹೇಳಿಕೊಂಡು ತನಗೆ ತಾನೇ ಉಬ್ಬುತ್ತಾ, ವಾರೆ ನೋಟದಿಂದ ರಾಜನ ಮುಖ ನೋಡಿದಳು, ರಾಜನೂ ತನಗೆ ಹೆದರುವನೆಂಬುದನ್ನು ಸೂಚಿಸುವ ಹಾಗೆ!

ಇಷ್ಟರೊಳಗೆ ಈ ಸಂಗತಿ ದಾಸಿಯರಿಂದ ಸುನೀತಿಗೆ ಗೊತ್ತಾಗಿತ್ತು. ನೊಂದುಕೊಂಡಿದ್ದ ಅವಳ ಮುಂದೆ ಹೋಗಿ ನಿಂತ ಕಂದ ಧ್ರುವನನ್ನು ನೋಡಿ, ಅವಳ ದುಃಖವೂ ಉಕ್ಕಿ ಸೂಸಿತು. ದಳದಳ ಕಣ್ಣೀರಿಳಿಸುತ್ತ, "ಹೌದು ಕಂದಾ! ದಾಸಿಗಿಂತಲೂ ಹೀನವಾಗಿ ಬದುಕಿಕೊಂಡಿರುವ ನನ್ನ ಹೊಟ್ಟೆಯಲ್ಲಿ ನೀನೇಕೆ ಹುಟ್ಟಬೇಕು? ನಿನ್ನ ಸವತಿ ತಾಯಿ ಹೇಳಿದ ಮಾತು ತೀರ ಸತ್ಯ. ನಿನಗೂ ನನಗೂ ಆ ನಾರಾಯಣ ಮೂರ್ತಿಯ ಹೊರತು ಬೇರೆ ಗತಿ ಯಾರಿದ್ದಾರೆ?" ಎಂದು ರೋದಿಸಿದಳು.

ಆಗ ಧ್ರುವನು ತಾನು ವೀರ ಕ್ಷತ್ರಿಯ ಕುಮಾರನೆಂಬುದನ್ನು ತೋರಿಸುವಂತೆ ಧೈರ್ಯದಲ್ಲಿ ನಿಂತು, "ಅಮ್ಮಾ, ನಾನು ತಪಸ್ಸು ಮಾಡಲು ಹೊರಟಿದ್ದೇನೆ. ಅದೇ ಸರಿ!" ಎಂದನು.

"ಏನೇನು! ತಪಸ್ಸು ಮಾಡುವೆಯಾ?" ಎಂದು ಸುನೀತಿ ದುಃಖವನ್ನು ನುಂಗಿ ಕಣ್ಣು ಒರೆಸಿಕೊಂಡು ಮಗನನ್ನು ಅಪ್ಪಿ, ತಲೆಯ ಮೇಲೆ ಕೈಯಿಟ್ಟು, "ಹಾಗೆಯೇ ಮಾಡು. ಮುಂದಿನ ಜನ್ಮದಲ್ಲಿ ಸುರುಚಿಯ ಹೊಟ್ಟೆಯಲ್ಲಿ ಹುಟ್ಟಬೇಕೆಂದು ವರ ಕೇಳಿಕೋ" ಎಂದಳು.

"ಹಾಗೆ ಹೇಳಬೇಡಮ್ಮಾ. ಮೂರು ಮಾತಿಗೂ ಹಾಗೆ ಮಾತ್ರ ಹೇಳಬೇಡ. ನಾನು ನಿನ್ನ ಮಗ. ಮತ್ತಾರಿಗೋ ಮಗನಾಗಿ ಹುಟ್ಟಬೇಕೆಂಬ ಆಸೆ ನನಗೆ ಏಕೆ ಬರುತ್ತೆ? ನಮ್ಮನ್ನು ನಾವು ಕಡಿಮೆ ಮಾಡಿಕೊಳ್ಳಲೇಬಾರದು, ಅದು ಆತ್ಮಹತ್ಯೆ ಮಾಡಿಕೊಂಡ ಹಾಗೆ! ನನ್ನನ್ನು ಹಡೆದ ನೀನು ಎಂತಹ ಭಾಗ್ಯವಂತೆ ಅನ್ನುವ ಹಾಗೆ, ಎಲ್ಲಾ ದಿಕ್ಕುಗಳಿಗೂ ನಾನೇ ದಿಕ್ಕಾಗಿರುವ ಹಾಗೆ ನಾರಾಯಣನನ್ನು ವರ ಕೇಳುತ್ತೇನೆ ಗೊತ್ತಾ! ಧೈರ್ಯವಾಗಿರು ಅಮ್ಮಾ!" ಎಂದು ಹೇಳಿ ಧ್ರುವನು ಹೊರಟು ಹೋದನು.

ಅರಣ್ಯದ ಮಾರ್ಗ ಹಿಡಿದು ಹೋಗುತ್ತಿದ್ದ ಧ್ರುವನ ಮುಂದೆ ನಾರದನು ಬಂದು, "ಓಹೋ ಧ್ರುವಕುಮಾರಾ, ಯಾವುದೋ ಹೊಸ ಆಟ ಆಡಲಿಕ್ಕೆ ಹೊರಟ ಹಾಗಿದೆ, ಹೌದಾ?" ಎಂದನು.

"ತಪಸ್ಸಿಗೆ ಹೋಗುತ್ತಿದ್ದೇನೆ ಸ್ವಾಮಿ. ಹರಸಿರಿ." ಎಂದು ಕೈಮುಗಿದನು ಧ್ರುವ.

"ತಪಸ್ಸು ಎಂಬ ಆಟ ಒಂದಿದೆಯೆಂದಾಯಿತು. ಬಹು ಚೆನ್ನಾಗಿ ಆಡಿಕೋ ಅಪ್ಪ" ಎಂದನು ನಾರದ.

"ಆಟ ಅಲ್ಲ ಸ್ವಾಮಿ. ನಿಜಕ್ಕೂ ತಪಸ್ಸು ಮಾಡಲು ಹೊರಟಿದ್ದೇನೆ" ಎಂದನು ಧ್ರುವ.

ಗೊತ್ತಾಯಿತು. ಈ ಸಣ್ಣ ವಿಷಯಕ್ಕೆ ತಪಸ್ಸು ಯಾಕೋ ? ನನ್ನೊಂದಿಗೆ ಬಾ, ನಿನ್ನ ತಂದೆ ನಿನ್ನನ್ನು ಯಾಕೆ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವುದಿಲ್ಲ, ನೋಡುತ್ತೇನೆ" ಎಂದನು ನಾರದ.

"ಅಂಥಾ ಹಟವಾವುದೂ ಈಗ ನನಗಿಲ್ಲ ಸ್ವಾಮಿ. ಅದೆಲ್ಲದಕ್ಕಿಂತಲೂ ಹಿರಿದಾದ ಶ್ರೀಮನ್ನಾರಾಯಣನ ಅನುಗ್ರಹವೇ ನನಗೆ ಬೇಕು. ಅದಕ್ಕೇ ತಪಸ್ಸು ಮಾಡಲು ಅರಣ್ಯಕ್ಕೆ ಹೊರಟಿದ್ದೇನೆ. ತಾಯಿಯ ಅಪ್ಪಣೆಯಾಗಿದೆ. ಕೋಪತಾಪ ಯಾವುದೂ ನನಗಿಲ್ಲ" ಎಂದನು ಧ್ರುವ.

ಧ್ರುವಬಾಲನ ಮನಸ್ಸಿನೊಳಗಿದ್ದ ಪ್ರೌಢತೆಯನ್ನು ಮುಗುಚಿ ಹಾಗೆ ಸುರುಚಿಯ ಮಾತು ಕೆಲಸ ಮಾಡಿತ್ತೆಂದು ನಾರದನಿಗೆ ಗೊತ್ತಾಯಿತು.

ಅವನು ತಲೆ ದೂಗುತ್ತಾ, "ಅಪ್ಪಾ, ತಪಸ್ಸು ಎಂದರೆ ಮಾತಾಡಿದ ಹಾಗಲ್ಲ. ಅರಣ್ಯದಲ್ಲಿ ಹುಲಿ ಸಿಂಹ ಮೊದಲಾದ ಕ್ರೂರಮೃಗಗಳಿರುತ್ತವೆ. ಬಿಸಿಲು ಮಳೆ ಚಳಿಗಳ ಕಾಟಗಳು ಎಷ್ಟೋ ಇವೆ. ನನ್ನ ಮಾತು ಕೇಳು. ಮನೆಗೆ ಹೋಗೋಣ" ಎಂದನು.

"ಸ್ವಾಮಿ. ನಾರದ ಮಹರ್ಷೀ ! ನಾನು ಕ್ಷತ್ರಿಯ ಕುಮಾರನೆಂಬುದನ್ನು ಮರೆಯಬೇಡಿ. ಪರಾಭವವನ್ನು ಸಹಿಸಿಕೊಂಡು ಬದುಕಿರುವವನಲ್ಲ. ನನಗೆ ಪುಕ್ಕಲು ಮಾತ್ರೆ ಪುಡಿ ಮಾಡಿ ಕೊಡುವಿರೇನು ? ಸರಿಯಾದ ದಾರಿ ಹೇಳಿರಯ್ಯಾ !" ಎಂದನು ಧ್ರುವ.

"ಅಪ್ಪಾ, ಧ್ರುವಕುಮಾರಾ ! ನಿನ್ನ ನಿರ್ಣಯವನ್ನು ತಿಳಿದುಕೊಳ್ಳಲಿಕ್ಕೇ ಹೀಗೆಲ್ಲಾ ಹೇಳಿದೆ. ಒಂದು ಕಾಲದಲ್ಲಿ ನಾನು ಕೂಡಾ ದಿಕ್ಕುಗೆಟ್ಟ ಹುಡುಗನಾಗಿ ಎಷ್ಟೆಷ್ಟೋ ಅವಮಾನಗಳಿಗೂ, ಕಷ್ಟಗಳಿಗೂ ಸಿಕ್ಕಿ ಬಿದ್ದು ಕಾಡು ಸೇರಿ ತಪಸ್ಸು ಮಾಡಿದವನೇ. ನೀನು ಮಧುವನಕ್ಕೆ ಹೋಗಿ, ಓಂ ನಮೋ ನಾರಾಯಣಾಯ ಎಂಬ ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತ ತಪಸ್ಸು ಮಾಡು. ನಿನ್ನನ್ನು ಮನಃಪೂರ್ವಕವಾಗಿ ಆಶೀರ್ವದಿಸುತ್ತೇನೆ, ಕೃತಾರ್ಥನಾಗುವಿಯಪ್ಪಾ !" ಎಂದನು ನಾರದ.

ಹೀಗೆ ಸೂತನು ಹೇಳಲು, ಮುನಿಗಳು, "ಸೂತ ಮುನೀಂದ್ರಾ, ನಾರದನು ಹಾಗೆಲ್ಲಾ ಕಷ್ಟಪಡಲು ಏನಾಯಿತು ? ಆ ನಾರದನ ವೃತ್ತಾಂತವನ್ನು ಕೇಳಬೇಕೆಂದು ನಮಗೆಲ್ಲಾ ಕುತೂಹಲವಾಗಿದೆ" ಎಂದು ಕೇಳಿಕೊಂಡರು.





# ಕುರುಡುಜೋಯಿಸ

ಒಂದಾನೊಂದುದಿನ ಒಬ್ಬ ಬಡವನು ತನ್ನ ಹೆಂಡತಿಯೊಂದಿಗೆ ಹೊಟ್ಟೆಗೆ ದಾರಿ ಕಾಣದೆ ಬಾಗ್ದಾದು ನಗರಕ್ಕೆ ಬಂದನು. ಅವರು ದಿನಾ ಹೊಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಏನಾದರೂ ಕೆಲಸವನ್ನು ಹುಡುಕುತ್ತ ಬೀದಿ ಬೀದಿ ತಿರುಗಿಕೊಂಡಿದ್ದರು. ಅದನ್ನು ನೋಡಿ ಒಬ್ಬ ದೊಡ್ಡ ಮನುಷ್ಯನು ಆ ಬಡವನೊಂದಿಗೆ, "ಏಕೆ ಹೀಗೆ ದಿನಾ ಬೀದಿಯಲ್ಲಿ ಸುತ್ತುವೆ? ಯಾರು ನೀನು? ಏನಾಗಬೇಕು ನಿಮಗೆ?" ಎಂದು ಕೇಳಿದನು.

"ಅಯ್ಯಾ, ಏನಾದರೂ ಕೂಲೀನಾಲೀ ಕೆಲಸ ಸಿಗುತ್ತಾ ಅಂತ ತಿರುಗುತ್ತಿದ್ದೇನೆ ಮತ್ತೇನಿಲ್ಲ." ಎಂದ ಬಡವ.

"ಯಾವುದಾದರೊಂದು ಸ್ವತಂತ್ರ ವೃತ್ತಿ ಮಾಡಿಕೊಳ್ಳಬಾರದೇನೋ ?" ಎಂದು ಕೇಳಿದ ದೊಡ್ಡ ಮನುಷ್ಯ.

"ಏನು ಮಾಡಲಿ ? ನನಗೆ ಯಾವ ವೃತ್ತಿಯೂ ಬಾರದಲ್ಲಾ" ಎಂದನು ಬಡವ.

"ಹಾಗಾದರೆ ಒಂದು ಮಾಡು. ಒಂದು ಕೊಡಲಿ ತೆಗೆದುಕೊಂಡು, ಸುಂಕದ ಕಚೇರೀ ಹತ್ತಿರ ಹೋಗಿ, ಅಲ್ಲಿ ರಾಶಿಬಿದ್ದಿರುವ ಮರದ ತುಂಡುಗಳನ್ನು ಸಣ್ಣ ಸಣ್ಣ ಕಟ್ಟಿಗೆಗಳಾಗಿ ಒಡೆದರೆ ಹಣ ಸಂಪಾದಿಸಬಹುದು. ಅಷ್ಟು ಮಾಡಲು ಸಾಧ್ಯವಾಗದೆ ?" ಎಂದನು ದೊಡ್ಡ ಮನುಷ್ಯ.

ಅದಾಗಬಹುದೆಂದು ಆ ಬಡವನು ಮಾರಣೇದಿನ ಕೊಡಲಿ ತೆಗೆದುಕೊಂಡು ಸುಂಕದ ಕಚೇರೀ ಹತ್ತಿರ ಹೋದನು. ಅಲ್ಲಿ ಕಟ್ಟಿಗೆಗಳನ್ನು ಒಡೆದನು. ಅದರಿಂದ ದೊರೆತ ಸ್ವಲ್ಪ ಹಣದಿಂದ ತನ್ನ ಹಾಗು ತನ್ನ ಹೆಂಡತಿಯ ಹೊಟ್ಟೆಗಳನ್ನು ಶಾಂತಿಗೊಳಿಸುತ್ತ ದಿನ ದೂಡತೊಡಗಿದನು. ಅವನ ತೃಪ್ತಿಗೆ ಅಷ್ಟೇ ಸಂಪಾದನೆ ಸಾಕೆನಿಸಿ ನೆಮ್ಮದಿಯಿಂದಿದ್ದನು.

ಒಂದುದಿನ ಆ ಬಡವನ ಹೆಂಡತಿ, "ನಾನು ಇವತ್ತು ಹಮಾಮ್‌ಗೆ ಹೋಗಿ ಸ್ನಾನಮಾಡಿ ಬರಬೇಕು. ಅದಕ್ಕೇನಾದರೂ ಹಣವಿದ್ದರೆ ಕೊಡಿ" ಎಂದಳು.

ಬಡವನು ಚಿಲ್ಲರೆ ಹಣ ಸ್ವಲ್ಪ ಅವಳಿಗೆ ಕೊಟ್ಟನು. ಅವನ ಹೆಂಡತಿ ಸ್ನಾನಶಾಲೆಗೆ ಹೋದಳು. ಅಲ್ಲಿ ಅವಳು ಶುಲ್ಕ ಸಲ್ಲಿಸಿ ಸ್ನಾನ ಮಾಡಿದಳು.

ಅರೇಬಿಯಾ ಕಥೆ



ಎಷ್ಟೋ ದೊಡ್ಡ ದೊಡ್ಡವರೆಲ್ಲಾ ಅಲ್ಲಿಗೆ ಬಂದು ತಮ್ಮ ತಮ್ಮ ಅಂತಸ್ತು ಅಧಿಕಾರಗಳಿಗೆ ತಕ್ಕಹಾಗೆ ಹೆಚ್ಚುಹೆಚ್ಚಿನ ಶುಲ್ಕದ ದೊಡ್ಡ ದೊಡ್ಡ ಸ್ನಾನಗಳನ್ನು ಮಾಡುತ್ತಿದ್ದರು. ಅಂಥವರ ಎಡೆಯಲ್ಲಿ ತಾನು ಮಾಡಿದ ಬಡ ಕಾಗೆ ಸ್ನಾನವನ್ನು ನೆನೆದು ಅವಳಿಗೆ ತುಂಬಾ ನಾಚಿಕೆಯಾಯಿತು.

ಅಷ್ಟರಲ್ಲಿ ಸುತ್ತುಮುತ್ತಲಿದ್ದವರು "ಹೊ: ! ಆಸ್ಥಾನ ಜ್ಯೋತಿಷ್ಕರ ಹೆಂಡತಿ!" ಎಂದು ಪರಸ್ಪರ ಹೇಳಿಕೊಂಡು ಭಯಭಕ್ತಿಯಿಂದ ಬದಿ ಬದಿಗೆ ಸರಿಯುವುದನ್ನು ನೋಡಿ, ಎಲ್ಲರಂತೆ ಅವಳೂ ನಿಂತು ತಲೆಯೆತ್ತಿ ಕತ್ತು ಎಕ್ಕಳಿಸಿ ನೋಡಿದಳು. ಆಸ್ಥಾನ ಜೋತಿಷ್ಕರ ಹೆಂಡತಿ ಸ್ನಾನ ಶಾಲೆಯೊಳಗೆ ರಾಜಠೀವಿಯಿಂದ ಪ್ರವೇಶ ಮಾಡಿದಳು.

"ಛೀ! ನನ್ನದು ಎಂಥ ಹಾಳುಬದುಕು! ಹೆಂಡತಿ ಎಂದರೆ ಆಸ್ಥಾನ ಜೋತಿಷ್ಕರ ಹೆಂಡತಿಯೇ ಆಗಬೇಕು!" ಎಂದುಕೊಳ್ಳುತ್ತಾ, ಬಡವನ ಹೆಂಡತಿ ಮನೆಗೆ ಹೋದಳು. ತನ್ನ ಗಂಡನು ಬಂದಕೂಡಲೇ "ಇಕೋ ನೋಡಿರಿ! ನೀವು ಈಗಲೇ ಹೋಗಿ ಆಸ್ಥಾನ ಜೋತಿಷ್ಕರಾಗಿ ಬರುವಿರಾ, ಅಲ್ಲ ನನ್ನನ್ನು ಬಿಟ್ಟು ಎತ್ತಾದರೂ ಹೋಗುವಿರಾ? ಎರಡರಲ್ಲೊಂದು ಬೇಗ ಖಂಡಿತ ಮಾಡಿ ಹೇಳಿ ಬಿಡಿ!" ಎಂದಳು.

ಬಡವನು ಬೆಕ್ಕಸ ಬೆರಗಾಗಿ, "ನನಗೆ ಓದೇ ಬಾರದು. ಜ್ಯೋತಿಷ್ಯ ಎಲ್ಲಿ ಬಂತು? ನಾನು ಆಸ್ಥಾನ ಜೋತಿಷ್ಕನಾಗುವುದೆಂದರೇನು? ಆಗುವ ಮಾತೇ ಇದು?" ಎಂದನು.

"ಅದೆಲ್ಲಾ ನಾನರಿಯೆ. ಆಸ್ಥಾನ ಜೋತಿಷ್ಕರಾದ ಹೊರತು ನಿಮ್ಮ ಮುಖ ನನಗೆ ತೋರಿಸಕೂಡದು. ಹೋಗಿರೆಂದರೆ ಹೋಗಿ! ಇನ್ನು ನಿಲ್ಲಬೇಡಿ" ಎಂದಳು ಹೆಂಡತಿ.

ಏನು ಮಾಡಲೂ ತೋರದೆ ಬಡವನು ಕಾಗದ, ಲೇಖನಿ, ಮಸಿದೌತಿಗಳನ್ನು ಸಂಪಾದಿಸಿಕೊಂಡು ಸ್ನಾನ ಶಾಲೆಯ ದ್ವಾರದ ಹತ್ತಿರ ಕುಳಿತು, ನಾಲ್ಕು ಮಂದಿಗೆ ಕಾಣುವ ಹಾಗೆ ನೆಲದ ಮೇಲೆ ಕಾಗದದಲ್ಲಿ ಏನೋ ಗೀರತೊಡಗಿದನು. ಜೋಯಿಸರು ಹಾಗೆ ಯಂತ್ರ ಗೀರಿ ಲೇಖನಿಯಾಡಿಸುವುದನ್ನು ಅವನು ನೋಡಿದ್ದನು.

ಸ್ವಲ್ಪಹೊತ್ತಿಗೆ ಸ್ನಾನಶಾಲೆಗೆ ಖಲೀಫರೇ ಸ್ವತಃ ಚಿತ್ತೈಸಿದರು. ಎಲ್ಲರೂ ಅವರ ಸುತ್ತಲೂ ಕೂಡಿ ಯಾಚಿಸುವುದನ್ನೂ, ತಮ್ಮ ಕಷ್ಟ ಹೇಳಿಕೊಂಡು ಬೇಡುವುದನ್ನೂ ನೋಡಿ ಬಡವನು, "ಮಹಾ ಪ್ರಭುಗಳು ಒಂದುಸಾರಿ ಹೀಗೆ ಈ ಬಡವನ ಬಳಿಗೆ ದಯಮಾಡಿಸುವಿರಾ?" ಎಂದು ಕೂಗಿದನು. ದಯಾಶಾಲಿಗಳಾದ ಖಲೀಫರು ಕೂಡಲೇ ಅವನ ಬಳಿಗೆ ಬಂದರು. ಮರುಕ್ಷಣದಲ್ಲಿ ಸ್ನಾನಶಾಲೆಯ ಮಾಡು ದೊಡ್ಡ ಸಪ್ಪಳದಿಂದ ಜರಿದು ಬಿತ್ತು.

"ಕ್ಷಣ ತಡವಾಗಿರುತ್ತಿದ್ದರೆ ಖಲೀಫರ ಪ್ರಾಣ ಹೋಗುತ್ತಿತ್ತು. ಆ ಜೋಯಿಸನು ಬಹುದೊಡ್ಡ ಜ್ಞಾನಿಯಾಗಿರಬೇಕು. ಖಲೀಫರ ಗಂಡಾಂತರ ತಪ್ಪಿಸಿಬಿಟ್ಟ!" ಎಂದು ಎಲ್ಲರೂ ಬಡವನನ್ನು ಮೆಚ್ಚಿಕೊಂಡರು. ಅಲ್ಲಿ ಸೇರಿದವರೆಲ್ಲಾ ತಮ್ಮಲ್ಲಿ ಏನಿದೆಯೋ ಅದನ್ನೆಲ್ಲಾ ಆ ಬಡವನಿಗೆ ಬಹುಮಾನ ಕೊಟ್ಟರು. ಖಲೀಫರಿಂದ ಬಂದ ಬಹುಮಾನವಂತೂ ಕೇಳುವುದೇ ಬೇಡ.

ಈ ಬಹುಮಾನಗಳನ್ನೆಲ್ಲಾ ಹೊರಿಸಿಕೊಂಡು ಬಡವನು ಮನೆಗೆ ಹೋಗಿ, ಹೆಂಡತಿಯನ್ನು ಕರೆದು, "ನೋಡಿದೆಯಾ? ನನಗೆ ಸಿಕ್ಕಿದ ಬಹುಮಾನಗಳ ರಾಶಿ? ಬೇಗ ಬಾ!" ಎಂದನು ಸಂತೋಷದಿಂದ.

"ಯಾರಿಗೆ ಬೇಕು ಈ ಬಹುಮಾನಗಳೆಲ್ಲ? ನೀವು ಆಸ್ಥಾನ ಜೋತಿಷ್ಯರಾದಿರಾ ಇಲ್ಲವಾ ಅದನ್ನು ಹೇಳಿ ಮೊದಲು!" ಎಂದು ಭುಸುಗುಟ್ಟಿದಳು ಹೆಂಡತಿ.

ಬಡವನು ಉತ್ಸಾಹವೆಲ್ಲಾ ಜರ್ರನೆ ಇಳಿದು ಮುಖ ಬಾಡಿಸಿಕೊಂಡು, "ಇನ್ನೂ ಇಲ್ಲ" ಎಂದನು.

"ಮತ್ತೆ ಏತಕ್ಕೆ ಬಂದಿರಿ ನಿಮ್ಮ ಹಾಳು ಮೋರೆ ಹೊತ್ತು! ಮುಖ ತೋರಿಸಬೇಡಿ, ಹೋಗಿ" ಎಂದಳು ಹೆಂಡತಿ. ಬಡವನು ತಲೆ ತಗ್ಗಿಸಿಕೊಂಡು ಹೋಗಿ ಸ್ನಾನಶಾಲೆಯ ಹತ್ತಿರ ಮೊದಲಿನಂತೆ ತಿಷ್ಠೆ ಹಾಕಿದನು.

ಒಂದುದಿನ ಖಲೀಫರ ವಜ್ರದುಂಗುರವು ಕಾಣದೆ ಹೋಯಿತು. ಎಷ್ಟು ಹುಡುಕಿದರೂ ಅದು ಸಿಗಲಿಲ್ಲ. ಕಡೆಗೆ ಯಾರೋ, "ಅಲ್ಲಿ ಹಮಾಮ್ ಬಾಗಿಲ ಹತ್ತಿರ ಕುಳಿತಿರುವ ಜೋಯಿಸ ಬಹಳ ಗಟ್ಟಿಗನಲ್ಲವೇ? ಮೊನ್ನೆ ಖಲೀಫರ ಜೀವ ಉಳಿಸಿದ್ದಾನೆ. ಈ ಕಳ್ಳತನವು ಅವನಿಂದಲೇ ಹೊರಗೆ ಬೀಳಬೇಕು" ಎಂದರು.

ಮತ್ತೇನು? ಖಲೀಫರು ಆ ಬಡವನನ್ನು ಕರೆಯಿಸಿ, ತನ್ನ ವಜ್ರದ ಉಂಗುರವು ಎಲ್ಲಿರುವುದೆಂದು ಕಂಡುಹಿಡಿಯುವಂತೆ ಅವನಿಗೆ ಆಜ್ಞೆ ಮಾಡಿದರು.





"ಆಳುವ ಪ್ರಭುಗಳು ನನಗೆ ಸ್ವಲ್ಪ ವ್ಯವಧಿ ದಯ ಪಾಲಿಸಬೇಕು" ಎಂದು ಬಡವನು ಏನೂ ತೋರದೆ ಕೈಮುಗಿದು ಬೇಡಿಕೊಂಡನು.

"ಎರಡು ದಿನಗಳನ್ನು ಕೊಡುತ್ತೇನೆ" ಎಂದರು ಖಲೀಫರು. ಅಷ್ಟರೊಳಗೆ ಬಾಗ್ದಾದನ್ನು ಬಿಟ್ಟು ಓಡಿಹೋಗಬೇಕೆಂದು ಆ ಬಡವನು ಅಂದು ಕೊಂಡನು. ಆದರೆ ಖಲೀಫರ ಭಟರು ಅವನನ್ನು ರಾಜಭವನದ ಆವರಣದೊಳಗೇ ದೊಡ್ಡದೊಂದು ಕೋಣೆಯೊಳಗೆ ಬಂಧಿಸಿ, ಅವನಿಗೆ ಬೇಕಾದ ಆಹಾರ ಮೊದಲಾದುವುಗಳನ್ನು ಅಲ್ಲಿಗೇ ತಂದು ಕೊಡುತ್ತಿದ್ದರು.

ಬಡವನ ಬುದ್ಧಿಗೆ ಗೆದ್ದಲು ಹಿಡಿದಂತಾಯಿತು. ಏನೂ ತೋರದೆ ದಿನವಿಡೀ ಕಿಟಕಿಯ ಹತ್ತಿರ ನಿಂತು ಹೊರಗಿನ ಮೈದಾನದ ಕಡೆಗೆ ನೋಡುತ್ತಾ ಇರುವನು. ಆ ಮೈದಾನದಲ್ಲಿ ಕೆಲವು ದೊಡ್ಡ ದೊಡ್ಡ ಬಾತುಕೋಳಿಗಳ ಮಂದೆ ಇದ್ದಿತು. ಅವುಗಳಲ್ಲಿ ಒಂದು ಬಾತುಕೋಳಿ ಕುಂಟುತ್ತಿದ್ದಿತು. ಅದು ಏನೋ ರೋಗದಲ್ಲಿರುವ ಹಾಗೆ ಅವನಿಗೆ ಕಾಣುತ್ತಿತ್ತು. ಅವನು ಅದನ್ನು ನೋಡುತ್ತ, "ಅದೂ ಪಾಪ, ನನ್ನ ಹಾಗೇ ಇದೆ" ಅಂದು ಕೊಂಡನು. ಅವನು ಎರಡು ದಿನಗಳೂ ಅದನ್ನೇ ನೋಡಿಕೊಂಡಿದ್ದನು. ಮೂರನೇ ದಿನ ಖಲೀಫರ ಭಟರು ಬಂದು ಕೋಣೆಯ ಬಾಗಿಲು ತೆರೆದು, ಅವನನ್ನು ಖಲೀಫರ ಬಳಿಗೆ ಕರೆದುಕೊಂಡು ಹೋದರು.

"ಆ ವಜ್ರದುಂಗುರ ಏನಾಯಿತು ? ಅದು ಎಲ್ಲಿರುವುದೆಂದು ಕಂಡುಹಿಡಿದಿಯಾ ?" ಎಂದು ಖಲೀಫರು ಕೇಳಿದರು.

"ಆಳುವವರು ದಯಮಾಡಬೇಕು. ನಾನು ಈ ಎರಡು ದಿನಗಳವರೆಗೆ ಒಂದು ಕುಂಟುವ ಬಾತು ಕೋಳಿಯ ಹೊರತು ಮತ್ತೇನನ್ನೂ ಕಾಣಲಿಲ್ಲ. ಅದು ಬೇಗ ಸಾಯುವುದೋ...." ಎಂದು ಮುಂದಿನ ಮಾತನ್ನು ತನ್ನೊಳಗೇ "ಅಲ್ಲ ನಾನೇ ಸಾಯುವೆನೋ" ಎಂದು ನುಂಗಿಕೊಂಡನು.

"ಕುಂಟು ಬಾತುಕೋಳಿ, ಸಾಯುವುದೋ..." ಎಂದು ಅವನು ಹೇಳಿದುದನ್ನು ಕೇಳಿ ಖಲೀಫರ ಭಟರು ಓಡುತ್ತಾ ಹೋಗಿ ಕುಂಟು ಬಾತುಕೋಳಿಯನ್ನು ಹಿಡಿದುಕೊಂಡು, ಅದರ ಹೊಟ್ಟೆಯನ್ನು ಕೊಯ್ದರು. ಹೊಟ್ಟೆಯೊಳಗಿದ್ದ ವಜ್ರದುಂಗುರವು ದೊರಕಿತು.

ಆ ಉಂಗುರವನ್ನು ಒಬ್ಬಳು ದಾಸಿ ಕದ್ದು, ಎಲ್ಲಿಯೂ ಅಡಗಿಸಿಡಲು ಸಾಧ್ಯವಾಗದೆ, ಬಾತು ಕೋಳಿಗೆ ನುಂಗಿಸಿದ್ದಳು. ಗುರುತಿಗಾಗಿ ಅದರ ಒಂದು ಕಾಲನ್ನು ಮುರಿದಿಟ್ಟಿದ್ದಳು.

ಬಡವನ ಜ್ಯೋತಿಷ್ಯದ ಪ್ರಜ್ಞೆಗೆ ಖಲೀಫರು ಮೆಚ್ಚಿಕೊಂಡು, ಅವನಿಗೆ ದೊಡ್ಡದೊಡ್ಡ ಬಹುಮಾನ ಗಳನ್ನು ಕೊಟ್ಟರು.

ಬಡವನು ಮನೆಗೆ ಹೋಗಿ ಹೆಂಡತಿಯೊಂದಿಗೆ, "ಈಸಾರಿ ಎಂತೆಂಥಾ ಬಹುಮಾನ ತಂದಿದ್ದೇನೆ ನೋಡು" ಎಂದನು.

"ನನ್ನ ಹತ್ತಿರ ಮತ್ತೆ ಬಹುಮಾನದ ಮಾತು ಹೇಳಲಿಕ್ಕೆ ಬರಲು ನಾಚಿಕೆಯಾಗೋದಿಲ್ವೇ? ಆಸ್ಥಾನ ಜ್ಯೋತಿಷ್ಕರಾದಿರಾ ಇಲ್ಲವಾ? ಹೇಳಿ" ಎಂದಳು ಹೆಂಡತಿ.

"ಇನ್ನೂ ಇಲ್ಲ" ಎಂದ ಬಡವ.

"ಹಾಗಾದರೆ ನಿಮ್ಮ ಮುಖ ತೋರಿಸಬೇಡಿ" ಎಂದು ಹೆಂಡತಿ ಬಾಗಿಲು ಹಾಕಿಕೊಂಡಳು.

ಬಡವನಿಗೆ ಜೀವದ ಮೇಲೆಯೇ ಬೇಸರ ಬಂತು. ನೇರಾಗಿ ಖಲೀಫರ ಹತ್ತಿರವೇ ಹೋಗಿ ಕೇಳಿ, ಇಲ್ಲವೆನ್ನಿಸಿಕೊಂಡು ಬಿಡೋಣವೆಂಬ ನಿಶ್ಚಯದಲ್ಲಿ ಹೊರಟನು. ಖಲೀಫರು ಉಪ್ಪರಿಗೆಯ ಮೇಲೆ ಆಸೀನರಾಗಿದ್ದರು. ದ್ವಾರಪಾಲಕರು ಬಡವನನ್ನು ಅಲ್ಲಿಗೆ ಕರೆದುಕೊಂಡು ಹೋದರು.

"ಆಳುವವರೊಂದಿಗೆ ಒಂದು ಕೇಳಬೇಕೆಂದು ಬಂದೆನು. ತಾವು ದಯ ಪಾಲಿಸಿದಿರಾದರೆ ನನಗೆ ತಮ್ಮ ಆಸ್ಥಾನದ ಜ್ಯೋತಿಷ್ಕನಾಗಬೇಕೆಂದು ಇದೆ" ಎಂದನು.

ಅದೇ ಸಮಯದಲ್ಲಿ ಒಬ್ಬ ನೌಕರನು ಒಂದು ಚೀಲದಲ್ಲಿ ಏನನ್ನೋ ಹಿಡಿದುಕೊಂಡು ಖಲೀಫರ ಬಳಿಗೆ ಬರುತ್ತಿದ್ದನು.

"ಅಕೋ, ಅಲ್ಲಿ ಬರುವವನು ಚೀಲದಲ್ಲಿ ಏನನ್ನು ತರುತ್ತಾನೆಂದು ಹೇಳಿದರೆ, ನೀನು ಕೇಳಿದ ಹಾಗೆ ನಿನ್ನನ್ನು ಆಸ್ಥಾನ ಜ್ಯೋತಿಷ್ಯನಾಗಿ ಇಟ್ಟುಕೊಳ್ಳುತ್ತೇನೆ" ಎಂದರು ಖಲೀಫರು.

ಬಡವನ ಗುಂಡಿಗೆ ಜಾರಿಹೋಯಿತು.

"ಆಳುವವರು ಕ್ಷಮಿಸಬೇಕು. ತಮ್ಮನ್ನು ಹಮಾಮ್‌ನಿಂದ ಹೊರಗೆ ಬರಲು ಹೇಳಿದೆ. ಆಗಲೇ ಮಾಡು ಬಿದ್ದುಹೋಯಿತು. ಕುಂಟು ಬಾತುಕೋಳಿ ನೋಡಿದೆ, ಅದರ ಪ್ರಾಣ ಹೋಗಿ ಉಂಗುರ ಸಿಕ್ಕಿತು. ಮೊಲಕ್ಕೆ ಎಷ್ಟೇ ಚುರುಕುತನವಿದ್ದರೂ ಏನು ಲಾಭ? ಬೇಟೆಗಾರರ ಬಲೆಗೆ ಬಿದ್ದೇ ಬೀಳುತ್ತೆ," ಎಂದನು ಬಡವ. ಅಷ್ಟರಲ್ಲಿ ನೌಕರನು ಚೀಲವನ್ನು ತಂದು ಅದರೊಳಗಿದ್ದ ಮೊಲವನ್ನು ಖಲೀಫರಿಗೆ ತೋರಿಸಿದನು.

"ಶಾಭಾಸ್! ನಿನಗಿಂತ ದೊಡ್ಡ ಜೋಯಿಸರು ಪ್ರಪಂಚದಲ್ಲೇ ಇರಲಿಕ್ಕಿಲ್ಲ. ನಿನ್ನನ್ನು ಈ ಕ್ಷಣದಿಂದ ಆಸ್ಥಾನ ಜ್ಯೋತಿಷ್ಯನಾಗಿ ನಿಯಮಿಸುತ್ತೇನೆ" ಎಂದರು ಖಲೀಫರು ಸಂತೋಷದಿಂದ.

ಬಡವನ ರೊಟ್ಟಿ ಜಾರಿ ತುಪ್ಪದಲ್ಲೇ ಬಿತ್ತು. ಅವನು ಮನೆಗೆ ಬಂದು ಸಂಗತಿ ಹೇಳಿದ ಕೂಡಲೇ, ಹೆಂಡತಿ ಅವನಿಗೆ ಮಾಡಿದ ಉಪಚಾರ ಅಷ್ಟಿಷ್ಟಲ್ಲ. ಅವಳ ಆನಂದಕ್ಕೆ ಮೇರೆ ಇರಲಿಲ್ಲ.



# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

## ಗೆದ್ದ ಶೀರ್ಷಿಕೆಗಳು ೧೯೮೪ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.







D. N. Prasad    Suryakant Yadav

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಮಾರ್ಚಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂ. ೫೦ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಜನವರಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಕೃಷ್ಣಾ, ಗೋವಿಂದಾ, ನಾರಾಯಣಾ!

ಎರಡನೇ ಫೋಟೋ: ಇಲ್ಲೇ ಇದ್ದೀನಿ ತಾತಾ

ಕಳುಹಿಸಿದವರು: ಕುಮಾರಿ ಆರ್. ಎಸ್. ಸಹನ, ಪಿ. ಜೆ. ಬಡಾವಣೆ, ದಾವಣಗೆರೆ.

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.